# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಮೇ ೧೪, ೨೦೧೫ (ವೈಶಾಖ ೨೪, ಶಕ ವರ್ಷ ೧೯೩೭)<br>Bangalore, Thursday, May 14, 2015 (Vaishakha 24, Shaka Varsha 1937) | ಸಂಚಿಕೆ ೨೦<br>Issue 20 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಆರ್ಥಿಕ ಇಲಾಖೆಯ ಉಪ ಕಾರ್ಯದರ್ಶಿ (ಆ ಮತ್ತು ಸಂ) ಇವರ ಆಪ್ತ ಶಾಖೆಯಲ್ಲಿರುವ ಸಹಾಯಕ ಸಾಂಖ್ಯಿಕ ಅಧಿಕಾರಿ ಹುದ್ದೆಯನ್ನು ಸಹಾಯಕ ನಿರ್ದೇಶಕರ ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :** ಆರ್ಥಿಕ ಇಲಾಖೆಯ ಕಡತ ಸಂಖ್ಯೆ: ಆಇ 188 ಸಮಯ 2014, ದಿನಾಂಕ : 24–12–2014.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಕಡತದಲ್ಲಿ ಉಪ ಕಾರ್ಯದರ್ಶಿ (ಆಯವ್ಯಯ ಮತ್ತು ಸಂಪನ್ಮೂಲ), ಆರ್ಥಿಕ ಇಲಾಖೆ ಇವರ ಆಪ್ತ ಶಾಖೆಯಲ್ಲಿ ಸಹಾಯಕ ಸಾಂಖ್ಯಿಕ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಶ್ರೀ ಮುಕುಂದ, ಇವರು ವರ್ಗಾವಣೆಗೊಂಡಿದ್ದು, ಅವರ ಸ್ಥಾನದಲ್ಲಿ ಶ್ರೀ ಸೋಮಶೇಖರ ಮೇಸ್ತ, ಸಹಾಯಕ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯರವರು ಕಾರ್ಯ ನಿರ್ವಹಿಸುತ್ತಿರುವುದರಿಂದ ಈ ಹಿಂದೆ ಇದ್ದ ಸಹಾಯಕ ಸಾಂಖ್ಯಿಕ ಅಧಿಕಾರಿ ಹುದ್ದೆಯನ್ನು ಸಹಾಯಕ ನಿರ್ದೇಶಕರು (ವೇತನ ಶ್ರೇಣಿ ರೂ. 22800–43200/–) ಎಂದು ಉನ್ನತೀಕರಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸಉಸೇ 2015 ಬೆಂಗಳೂರು, ದಿನಾಂಕ: 02ನೇ ಫೆಬ್ರವರಿ, 2015**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಆಥಿಕ ಇಲಾಖೆ (ಆಯವ್ಯಯ ಮತ್ತು ಸಂಪನ್ಮೂಲ)ಯಲ್ಲಿ ವಿತ್ತೀಯ ನಿರ್ವಹಣೆಗೆ ಸಂಬಂಧಿಸಿದಂತೆ ಎಲ್ಲಾ ಕೆಲಸಗಳನ್ನು ನಿರ್ವಹಿಸುತ್ತಿರುವುದರಿಂದ ಆಡಳಿತಾತ್ಮಕ ಹಿತದೃಷ್ಟಿಯಿಂದ ಪ್ರಸ್ತುತ ಇರುವ ಸಹಾಯಕ ಸಾಂಖ್ಯಿಕ ಅಧಿಕಾರಿ ಹುದ್ದೆಯನ್ನು ಸಹಾಯಕ ನಿರ್ದೇಶಕರ ಹುದ್ದೆಗೆ ಉನ್ನತೀಕರಿಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10–07–1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

(ಸೇವೆಗಳು–6)

P.R. 141

### ಕಾರ್ಮಿಕ ಸಚಿವಾಲಯ

**ವಿಷಯ :** ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯ ಎಂ.ಬಿ.ಬಿ.ಎಸ್./ಬಿಡಿಎಸ್ ವೈದ್ಯಾಧಿಕಾರಿಗಳಿಗೆ ಹೆಚ್ಚುವರಿಯಾಗಿ ವಿವಿಧ ಭತ್ಯೆಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಕಾಇ 370 ಎಲ್ಎಸ್ಐ 2009, ದಿನಾಂಕ: 01-10-2010.

2) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 27 ಎಲ್ಎಸ್ಐ 2012 ದಿನಾಂಕ: 09-07-2012

3) ನಿರ್ದೇಶಕರು, ಕಾ.ರಾ.ವಿ. ಯೋಜನೆ ವೈದ್ಯಕೀಯ ಸೇವೆಗಳು, ಇವರ ಪತ್ರ ಸಂಖ್ಯೆ: ಅಭಿವೃದ್ಧಿ/164/2009-10, ದಿನಾಂಕ: 08-01-2013 ಮತ್ತು 10-01-2013.

4) ಸರ್ಕಾರದ ಆದೇಶ ಸಂಖ್ಯೆ: ಕಾಇ 03 ಎಲ್ಎಸ್ಐ 2013, ದಿನಾಂಕ: 22-10-2013.

5) ನಿರ್ದೇಶಕರು, ಕಾ.ರಾ.ವಿ. ಯೋಜನೆ ವೈದ್ಯಕೀಯ ಸೇವೆಗಳು, ಇವರ ಪತ್ರ ಸಂಖ್ಯೆ: ಅಭಿವೃದ್ಧಿ/164/2009-10 ದಿನಾಂಕ: 22-06-2013 ಮತ್ತು 28-10-2013 ವೈದ್ಯರು/286/2014-15, ದಿನಾಂಕ: 22-07-2014 ಮತ್ತು ವೈದ್ಯರು/147/2014-15, ದಿನಾಂಕ: 19-09-2014.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯ ವಿವಿಧ ವೃಂದದ ಎಲ್ಲಾ ವೈದ್ಯರಿಗೆ ಮಾಸಿಕ ₹3,000-00ದಂತೆ ತುರ್ತು ಚಿಕಿತ್ಸಾ ಭತ್ಯೆ, ಡಿಪ್ಲೋಮಾ ಪದವಿ ಪಡೆದ ವೈದ್ಯರಿಗೆ ಮಾಸಿಕ ₹6,000-00 ಹಾಗೂ ಸ್ನಾತಕೋತ್ತರ ಪದವಿ ಪಡೆದ ವೈದ್ಯರಿಗೆ ಮಾಸಿಕ ₹8,000-00 ಸೂಪರ್ ಸ್ಪೆಷಾಲಿಟಿ ಹೊಂದಿದ ತಜ್ಞ ವೈದ್ಯರಿಗೆ ಮಾಸಿಕ ₹10,000-00 ಭತ್ಯೆಗಳನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಮಾದರಿಯಲ್ಲಿ ಮಂಜೂರು ಮಾಡಲಾಗಿದೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಡಿಪ್ಲೋಮಾ ಪದವಿ ಪಡೆದ ವೈದ್ಯರಿಗೆ ದಿನಾಂಕ: 28-12-2011 ರಿಂದ ಅನ್ವಯವಾಗುವಂತೆ ಮಾಸಿಕ 6000-00ಗಳ ಭತ್ಯೆಯನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಮಾದರಿಯಲ್ಲಿ 7,000-00ಗಳಿಗೆ ಪರಿಷ್ಕರಿಸಲಾಗಿದೆ.

ನಿರ್ದೇಶಕರು, ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ರವರು ಮೇಲೆ ಓದಲಾದ (3)ರ ಪ್ರಸ್ತಾವನೆಗಳಲ್ಲಿ ಸರ್ಕಾರದ ಆದೇಶ ಸಂಖ್ಯೆ : ಆಕುಕ 20 ಹೆಚ್ಎಸ್ಹೆಚ್ 2012, ದಿನಾಂಕ: 18-12-2012ರ ಆದೇಶವನ್ನು ಉಲ್ಲೇಖಿಸಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವಿವಿಧ ವೃಂದದ ವೈದ್ಯಾಧಿಕಾರಿ/ದಂತ ಆರೋಗ್ಯಾಧಿಕಾರಿಗಳಿಗೆ ಹೆಚ್ಚುವರಿಯಾಗಿ ವಿವಿಧ ಭತ್ಯೆಗಳನ್ನು ಪರಿಷ್ಕರಿಸಿದ ದಿನಾಂಕದಿಂದಲೇ ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳ ಇಲಾಖೆಗೆ ಜಾರಿಗೆ ಬರುವಂತೆ ಈ ಕೆಳಕಂಡಂತೆ ಪರಿಷ್ಕರಿಸಿ ವಿವಿಧ ಭತ್ಯೆಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ :-

| ಸೇವಾವಧಿ | ಎಂ.ಬಿ.ಬಿ.ಎಸ್. ವಿದ್ಯಾರ್ಹತೆಗೆ ತುರ್ತು ಚಿಕಿತ್ಸಾ ಮಾಸಿಕ ಭತ್ಯೆ ₹3,000 ಮತ್ತು ಗ್ರಾಮೀಣ ಭತ್ಯೆ ಮಾಸಿಕ ₹7,000 | ಡಿಪ್ಲೋಮಾ ವಿದ್ಯಾರ್ಹತೆಗೆ (ಮಾಸಿಕ ₹7,000/- ಮತ್ತು ತುರ್ತು ಚಿಕಿತ್ಸಾ ಭತ್ಯೆ ₹3,000) | ಸ್ನಾತಕೋತ್ತರ ಪದವಿ ವಿದ್ಯಾರ್ಹತೆಗೆ (ಮಾಸಿಕ ₹8,000/- ಮತ್ತು ತುರ್ತು ಚಿಕಿತ್ಸಾ ಭತ್ಯೆ ₹3,000) | ಸೂಪರ್ ಸ್ಪೆಷಾಲಿಟಿ ತಜ್ಞ ಪದವಿ ವಿದ್ಯಾರ್ಹತೆಗೆ (ಮಾಸಿಕ ₹10,000/- ಮತ್ತು ತುರ್ತು ಚಿಕಿತ್ಸಾ ಭತ್ಯೆ ₹3,000) |
|---|---|---|---|---|
| 0-6 ವರ್ಷಗಳ ಸೇವೆ ಸಲ್ಲಿಸಿದವರಿಗೆ | ₹10,000-00 ದಿಂದ ₹16,000-00 ಗಳಿಗೆ | ₹10,000-00 ದಿಂದ ₹17,600-00 ಗಳಿಗೆ | ₹11,000-00 ದಿಂದ ₹17,600-00 ಗಳಿಗೆ | ₹13,000-00 ದಿಂದ ₹20,800-00 ಗಳಿಗೆ |
| 06-13 ವರ್ಷಗಳ ಸೇವೆ ಸಲ್ಲಿಸಿದವರಿಗೆ | ₹10,000-00 ದಿಂದ ₹17,000-00 ಗಳಿಗೆ | ₹10,000-00 ದಿಂದ ₹18,700-00 ಗಳಿಗೆ | ₹11,000-00 ದಿಂದ ₹18,700-00 ಗಳಿಗೆ | ₹13,000-00 ದಿಂದ ₹22,100-00 ಗಳಿಗೆ |
| 13ಕ್ಕಿಂತ ಹೆಚ್ಚಿನ ಸೇವೆ ಸಲ್ಲಿಸಿದವರಿಗೆ | ₹10,000-00 ದಿಂದ ₹18,000-00 ಗಳಿಗೆ | ₹10,000-00 ದಿಂದ ₹19,800-00 ಗಳಿಗೆ | ₹11,000-00 ದಿಂದ ₹19,800-00 ಗಳಿಗೆ | ₹13,000-00 ದಿಂದ ₹23,400-00 ಗಳಿಗೆ |

ಪ್ರಸ್ತುತ ರಾಜ್ಯದಲ್ಲಿ 18.52 ಲಕ್ಷ ವಿಮಾದಾರರಿದ್ದು, ಪ್ರತಿ ವಿಮಾದಾರರಿಗೆ ವಾರ್ಷಿಕ ₹1,500-00 ಮಿತಿಯಂತೆ 278.40 ಕೋಟಿ ವೆಚ್ಚವನ್ನು ಮಾಡಬಹುದಾಗಿದೆಯೆಂದು ಕಾ.ರಾ.ವಿ. ನಿಗಮವು ನಿಗದಿಪಡಿಸಿದೆ. ಉಪ ವೈದ್ಯಕೀಯ ಆಯುಕ್ತರು, ಕಾ.ರಾ.ವಿ ನಿಗಮ, ನವದೆಹಲಿ ಇವರ ಪತ್ರ ಸಂಖ್ಯೆ. V-13/12/03//2001-Med-1/ceiling, ದಿನಾಂಕ:06-01-2012ರ ಪತ್ರವನ್ನು ಉಲ್ಲೇಖಿಸಿದ್ದಾರೆ.

ವೈದ್ಯರಿಗೆ ವಿವಿಧ ಭತ್ಯೆಗಳನ್ನು ಹೆಚ್ಚುವರಿಯಾಗಿ ಮಂಜೂರು ಮಾಡುವುದರಿಂದ ವಾರ್ಷಿಕ ವೆಚ್ಚ ₹5,22,39,600/- ಗಳಾಗುತ್ತದೆಂದು ಇದರಲ್ಲಿ ಕಾರಾವಿ ನಿಗಮದ ಪಾಲು ಶೇ.87.50ರಷ್ಟು ಅಂದರೆ ₹4,57,09,650/- ರಾಜ್ಯ ಸರ್ಕಾರದ ಪಾಲು ಶೇ.12.50ರಷ್ಟು ಅಂದರೆ ₹65,29,950/- ಗಳಾಗಿರುತ್ತದೆಯೆಂದು ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2210-01-102-0-01 (ಯೋಜನೇತರ/ಯೋಜನೆ) 014 ಇತರೆ ಭತ್ಯೆಗಳ ಲೆಕ್ಕ ಶೀರ್ಷಿಕೆಯಲ್ಲಿ ಭರಿಸಬಹುದೆಂದು ತಿಳಿಸಿದ್ದಾರೆ.

ಮೇಲೆ ಓದಲಾದ (4)ರ ಆದೇಶದಲ್ಲಿ ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯ ವಿವಿಧ ವೃಂದದ ವೈದ್ಯಾಧಿಕಾರಿಗಳಿಗೆ/ದಂತ ವೈದ್ಯರಿಗೆ ದಿನಾಂಕ:18-12-2012ರಿಂದ ಜಾರಿಗೆ ಬರುವಂತೆ ಈ ಕೆಳಕಂಡ ಮಾದರಿಯಲ್ಲಿ ಹೆಚ್ಚುವರಿಯಾಗಿ ವಿವಿಧ ವಿಶೇಷ ಭತ್ಯೆಗಳನ್ನು ಪರಿಷ್ಕರಿಸಿ ಮಂಜೂರಾತಿ ನೀಡಿದೆ:-

| ಸೇವಾವಧಿ | ಎಂ.ಬಿ.ಬಿ.ಎಸ್. ವಿದ್ಯಾರ್ಹತೆಗೆ ಮಾಸಿಕ ₹) | ಡಿಪ್ಲೋಮಾ ವಿದ್ಯಾರ್ಹತೆಗೆ ಮಾಸಿಕ ₹) | ಸ್ನಾತಕೋತ್ತರ ಪದವಿ ವಿದ್ಯಾರ್ಹತೆಗೆ ಮಾಸಿಕ ₹) | ಸೂಪರ್ ಸ್ಪೆಷಾಲಿಟಿ ತಜ್ಞ ಪದವಿ ವಿದ್ಯಾರ್ಹತೆಗೆ ಮಾಸಿಕ ₹) |
|---|---|---|---|---|
| 0-6 ವರ್ಷಗಳ ಸೇವೆ ಸಲ್ಲಿಸಿದವರಿಗೆ | ₹3,000-00 ದಿಂದ ₹9,000-00 ಗಳಿಗೆ | ₹10,000-00 ದಿಂದ ₹17,600-00 ಗಳಿಗೆ | ₹11,000-00 ದಿಂದ ₹17,600-00 ಗಳಿಗೆ | ₹13,000-00 ದಿಂದ ₹20,800-00 ಗಳಿಗೆ |

| ಸೇವಾವಧಿ | ಎಂ.ಬಿ.ಬಿ.ಎಸ್. ವಿದ್ಯಾರ್ಹತೆಗೆ ಮಾಸಿಕ ₹) | ಡಿಪ್ಲೋಮಾ ವಿದ್ಯಾರ್ಹತೆಗೆ ಮಾಸಿಕ ₹) | ಸ್ನಾತಕೋತ್ತರ ಪದವಿ ವಿದ್ಯಾರ್ಹತೆಗೆ ಮಾಸಿಕ ₹) | ಸೂಪರ್ ಸ್ಪೆಷಾಲಿಟಿ ತಜ್ಞ ಪದವಿ ವಿದ್ಯಾರ್ಹತೆಗೆ ಮಾಸಿಕ ₹) |
|---|---|---|---|---|
| 06–13 ವರ್ಷಗಳ ಸೇವೆ ಸಲ್ಲಿಸಿದವರಿಗೆ | ₹3,000–00 ದಿಂದ ₹10,000–00 ಗಳಿಗೆ | ₹10,000–00 ದಿಂದ ₹18,700–00 ಗಳಿಗೆ | ₹11,000–00 ದಿಂದ ₹18,700–00 ಗಳಿಗೆ | ₹13,000–00 ದಿಂದ ₹22,100–00 ಗಳಿಗೆ |
| 13ಕ್ಕಿಂತ ಹೆಚ್ಚಿನ ಸೇವೆ ಸಲ್ಲಿಸಿದವರಿಗೆ | ₹3,000–00 ದಿಂದ ₹11,000–00 ಗಳಿಗೆ | ₹10,000–00 ದಿಂದ ₹19,800–00 ಗಳಿಗೆ | ₹11,000–00 ದಿಂದ ₹19,800–00 ಗಳಿಗೆ | ₹13,000–00 ದಿಂದ ₹23,400–00 ಗಳಿಗೆ |

ನಿರ್ದೇಶಕರು, ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇವರು ಮೇಲೆ ಓದಲಾದ (5)ರ ದಿನಾಂಕ: 22–06–2013, 28–10–2013, 22–07–2014 ಮತ್ತು 19–09–2014ರ ಪತ್ರಗಳಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ವಿವಿಧ ವೃಂದದ ವೈದ್ಯಾಧಿಕಾರಿ/ದಂತ ಆರೋಗ್ಯಾಧಿಕಾರಿಗಳಿಗೆ ಅನ್ವಯವಾಗುವಂತೆ ಸರ್ಕಾರಿ ಆದೇಶ ಸಂಖ್ಯೆ: ಆಕುಕ 20 ಹೆಚ್‌ಎಸ್‌ಆರ್ 2012, ದಿನಾಂಕ: 18–12–2012 ರಂದು ಹೊರಡಿಸಿರುವ ಆದೇಶಕ್ಕೆ ಮಹಾಲೇಖಪಾಲರು ಕೆಲವೊಂದು ಸ್ಪಷ್ಟೀಕರಣವನ್ನು ಕೋರಿದ್ದು, ಸದರಿ ಆಕ್ಷೇಪಣೆಗಳಿಗೆ ಆ.ಕು.ಕ. ಇಲಾಖೆಯಿಂದ ಮಾಹಿತಿಯನ್ನು ಒದಗಿಸಿರುತ್ತಾರೆ. ಸ್ನಾತಕೋತ್ತರ ಹಾಗೂ ಡಿಪ್ಲೋಮೊ ವಿದ್ಯಾರ್ಹತೆಯನ್ನು ಹೊಂದಿದ ವೈದ್ಯಾಧಿಕಾರಿಗಳು ನಿರ್ವಹಿಸುತ್ತಿರುವ ಕರ್ತವ್ಯಗಳು ಒಂದೇ ಮಾದರಿ ಆಗಿರುವುದರಿಂದ ಅವರುಗಳು ಪಡೆಯುತ್ತಿರುವ ವೇತನದಲ್ಲಿ ತಾರತಮ್ಯ ಇರಬಾರದು ಎಂಬ ಹಿನ್ನೆಲೆಯಲ್ಲಿ ಏಕರೂಪ ಭತ್ಯೆಯಾಗಿ ರೂ. 11,000–00 ಎಂದು ನಿಗಧಿಪಡಿಸಿ ತದನಂತರ ಅವರ ಸೇವಾ ಅವಧಿಗೆ ಅನುಗುಣವಾಗಿ 0–06 ವರ್ಷ ಸೇವಾ ಅವಧಿಗೆ ಶೇ.60ರಷ್ಟು 6–13 ವರ್ಷ ಸೇವಾ ಅವಧಿಗೆ ಶೇ.70ರಷ್ಟು 13 ವರ್ಷಕ್ಕೂ ಮೇಲ್ಪಟ್ಟ ಸೇವೆಗೆ ಶೇ.80 ರಷ್ಟು ಹೆಚ್ಚಳವನ್ನು ನಿಗಧಿಗೊಳಿಸಲಾಗಿದೆ.

ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಎಲ್ಲಾ ಎಂ.ಬಿ.ಬಿ.ಎಸ್. ವೈದ್ಯಾಧಿಕಾರಿಗಳಿಗೆ ಹಾಗೂ ದಂತ ವೈದ್ಯಾಧಿಕಾರಿಗಳಿಗೆ ಏಕ ಮಾದರಿ ವಿಶೇಷ ಭತ್ಯೆ ರೂ. 10,000–00 ಎಂದು ನಿಗಧಿಪಡಿಸಿ, ತದನಂತರ ಸೇವಾ ಅವಧಿಗೆ ಅನುಗುಣವಾಗಿ 0–6 ವರ್ಷ ಸೇವಾ ಅವಧಿಗೆ ಶೇ.60 ರಷ್ಟು, 6–13 ಸೇವಾ ಅವಧಿಗೆ ಶೇ.70 ರಷ್ಟು ಹೆಚ್ಚಳವನ್ನು ನಿಗಧಿಗೊಳಿಸಿರುತ್ತಾರೆ. ಆದ್ದರಿಂದ ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಎಲ್ಲಾ ಎಂ.ಬಿ.ಬಿ.ಎಸ್. ವೈದ್ಯಾಧಿಕಾರಿಗಳಿಗೆ ಹಾಗೂ ದಂತ ವೈದ್ಯಾಧಿಕಾರಿಗಳಿಗೆ ಏಕ ಮಾದರಿಯಾಗಿ ವಿಶೇಷ ಭತ್ಯೆ ರೂ. 10,000–00ಕ್ಕೆ ನಿಗಧಿಪಡಿಸಿ ತದನಂತರ ಅವರ ಸೇವಾ ಅವಧಿಗೆ ಅನುಗುಣವಾಗಿ 0–6 ವರ್ಷಕ್ಕೆ ಶೇ.60ರಷ್ಟು, 6–13 ವರ್ಷ ಸೇವಾ ಅವಧಿಗೆ ಶೇ.70ರಷ್ಟು 13 ವರ್ಷ ಸೇವಾ ಅವಧಿ ಮೀರಿದ ಸೇವೆಗೆ ಶೇ.80ರಷ್ಟು ಅಂದರೆ ಮಾಸಿಕ ಕ್ರಮವಾಗಿ ₹16,000–00, ₹17,000–00 ಹಾಗೂ ₹18,000/–ಗಳ ವಿಶೇಷ ಭತ್ಯೆಯನ್ನು ಹೆಚ್ಚಳ ಮಾಡಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯಲ್ಲಿ ಎಂ.ಬಿ.ಬಿ.ಎಸ್./ಬಿ.ಡಿ.ಎಸ್. ವೈದ್ಯಾಧಿಕಾರಿಗಳ ಅಂಕಿ ಅಂಶ ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಮಾದರಿಯಲ್ಲಿ ಭತ್ಯೆಯನ್ನು ವಿಸ್ತರಿಸಿದಲ್ಲಿ ಉಂಟಾಗುವ ವೆಚ್ಚದ ವಿವರ ಸಲ್ಲಿಸಿದ್ದಾರೆ:–

| ಸೇವಾವಧಿ | ವೈದ್ಯರ ಸಂಖ್ಯೆ | ಪ್ರಸ್ತುತ ಪಡೆಯುತ್ತಿರುವ ಭತ್ಯೆ | ಆಕುಕ ಇಲಾಖೆಯಲ್ಲಿ ವಿಸ್ತರಿಸಲಾಗುತ್ತಿರುವ ಭತ್ಯೆ | ವ್ಯತ್ಯಾಸ |
|---|---|---|---|---|
| 0–6 | 64 | 9,000–00 | 16,000–00 | 7,000–00 |
| 06–13 ವರ್ಷ | 08 | 10,000–00 | 17,000–00 | 7,000–00 |
| 13 ವರ್ಷ ಮತ್ತು ಮೇಲ್ಪಟ್ಟ | 79 | 11,000–00 | 18,000–00 | 7,000–00 |

ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯಲ್ಲಿ 151 ಎಂ.ಬಿ.ಬಿ.ಎಸ್./ಬಿ.ಡಿ.ಎಸ್. ವೈದ್ಯಾಧಿಕಾರಿಗಳು ಕಾರ್ಯನಿರ್ವಹಿಸುತ್ತಿದ್ದು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಮಾದರಿಯಲ್ಲಿ ಭತ್ಯೆ ವಿಸ್ತರಿಸಿದಲ್ಲಿ ವಾರ್ಷಿಕ ₹1,26,84,000/–ಗಳು ವೆಚ್ಚವಾಗುತ್ತಿದ್ದು, ಇದರಲ್ಲಿ ಕಾ.ರಾ.ವಿ. ನಿಗಮದ ಪಾಲು ₹1,10,98,500–00 ರಾಜ್ಯ ಸರ್ಕಾರದ ಪಾಲು ₹15,85,500–00ಗಳಾಗಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ. ಕಾಇ 440 ಎಲ್‌ಎಸ್‌ಐ 2014, ಬೆಂಗಳೂರು, ದಿನಾಂಕ: 31–01–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯ ಎಂ.ಬಿ.ಬಿ.ಎಸ್./ಬಿ.ಡಿ.ಎಸ್. ವೈದ್ಯಾಧಿಕಾರಿಗಳಿಗೆ ದಿನಾಂಕ: 18–12–2012ರಿಂದಲೇ ಜಾರಿಗೆ ಬರುವಂತೆ ಈ ಕೆಳಕಂಡ ಮಾದರಿಯಲ್ಲಿ ಹೆಚ್ಚುವರಿಯಾಗಿ ವಿವಿಧ ವಿಶೇಷ ಭತ್ಯೆಗಳನ್ನು ಪರಿಷ್ಕರಿಸಿ ಮಂಜೂರಾತಿ ನೀಡಿದೆ:–

| ಸೇವಾವಧಿ | ಎಂ.ಬಿ.ಬಿ.ಎಸ್. ವಿದ್ಯಾರ್ಹತೆಗೆ ಹೊಂದಿರುವ ವೈದ್ಯರಿಗೆ ಪ್ರಸ್ತುತ ನೀಡುತ್ತಿರುವ ವಿಶೇಷ ಭತ್ಯೆ (ಮಾಸಿಕ ₹) | ಎಂ.ಬಿ.ಬಿ.ಎಸ್./ಬಿ.ಡಿ.ಎಸ್ ವಿದ್ಯಾರ್ಹತೆ ಹೊಂದಿರುವ ವೈದ್ಯರಿಗೆ ಪರಿಷ್ಕೃತಗೊಳಿಸಿದ ವಿಶೇಷ ಭತ್ಯೆ (ಮಾಸಿಕ ₹) |
|---|---|---|
| 0–6 ವರ್ಷಗಳ ಸೇವೆ ಸಲ್ಲಿಸಿದವರಿಗೆ | 9,000–00 | 16,000–00 |
| 06–13 ವರ್ಷಗಳ ಸೇವೆ ಸಲ್ಲಿಸಿದವರಿಗೆ | 10,000–00 | 17,000–00 |
| 13ಕ್ಕಿಂತ ಹೆಚ್ಚಿನ ಸೇವೆ ಸಲ್ಲಿಸಿದವರಿಗೆ | 11,000–00 | 18,000–00 |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ.ಎಫ್‌ಡಿ 62 Ser-2/2013, ದಿನಾಂಕ: 26–03–2013 ಮತ್ತು ಆಇ 433 ಸೇ–2/2014, ದಿನಾಂಕ: 12–11–2014ರ ಅಭಿಪ್ರಾಯ/ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ. ನಾಗೇಶ್‌ರಾವ್,**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ
(ಕಾರಾವಿ ಯೋ ವೈ. ಸೇವೆಗಳು)

**P.R. 142**

**SC-200**

## ಕಾನೂನು ಸಚಿವಾಲಯ

**ವಿಷಯ :** ಶ್ರೀ ಸಿ.ಎಸ್. ದೇವರಾಜೇಗೌಡ, ವಕೀಲರು ಮತ್ತು ನೋಟರಿ, ಚನ್ನರಾಯಪಟ್ಟಣ ಕಂದಾಯ ತಾಲ್ಲೂಕು, ಹಾಸನ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಪ್ರಮಾಣ ಪತ್ರ ಸಂಖ್ಯೆ: ಲಾ 341 ಎಲ್‌ಸಿಎಲ್ 2011, ದಿನಾಂಕ: 05–04–2014.

2) ಶ್ರೀ ಸಿ.ಎಸ್. ದೇವರಾಜೇಗೌಡ, ವಕೀಲರು ಮತ್ತು ನೋಟರಿ ಇವರು ಮನವಿ ದಿನಾಂಕ: 24–01–2015.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಪ್ರಮಾಣ ಪತ್ರದಲ್ಲಿ ಶ್ರೀ ಸಿ.ಎಸ್. ದೇವರಾಜೇಗೌಡ, ವಕೀಲರು ಮತ್ತು ನೋಟರಿ, ಚನ್ನರಾಯಪಟ್ಟಣ ಕಂದಾಯ ತಾಲ್ಲೂಕು, ಹಾಸನ ಜಿಲ್ಲೆ ಇವರ ನೋಟರಿ ವೃತ್ತಿ ಪ್ರಮಾಣ ಪತ್ರವನ್ನು ನೋಟರಿ ನಿಯಮಾವಳಿ 1956ರ ನಿಯಮ 8(ಬಿ) ರನ್ವಯ 05 ವರ್ಷಗಳ ಅವಧಿಗೆ ನವೀಕರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಂತೆ ಶ್ರೀ ಸಿ.ಎಸ್. ದೇವರಾಜೇಗೌಡ, ವಕೀಲರು ಮತ್ತು ನೋಟರಿ, ಚನ್ನರಾಯಪಟ್ಟಣ ಕಂದಾಯ ತಾಲ್ಲೂಕು, ಹಾಸನ ಜಿಲ್ಲೆ ಇವರು ದಿನಾಂಕ: 24–01–2015 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಮನವಿಯನ್ನು ಸಲ್ಲಿಸುತ್ತಾ, ವೈಯಕ್ತಿಕ ಕಾರಣಗಳನ್ನು ವಿವರಿಸುವ ಮೂಲಕ ಚನ್ನರಾಯಪಟ್ಟಣ ಕಂದಾಯ ತಾಲ್ಲೂಕು, ಹಾಸನ ಜಿಲ್ಲೆಯ ನೋಟರಿ ಹುದ್ದೆಗೆ ರಾಜೀನಾಮೆಯನ್ನು ಅಂಗೀಕರಿಸುವಂತೆ ಕೋರಿರುತ್ತಾರೆ.

ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 65 ಎಲ್.ಸಿ.ಎಲ್ 2015, ಬೆಂಗಳೂರು, ದಿನಾಂಕ: 18–03–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಸಿ.ಎಸ್. ದೇವರಾಜೇಗೌಡ, ವಕೀಲರು ಮತ್ತು ನೋಟರಿ, ಚನ್ನರಾಯಪಟ್ಟಣ ಕಂದಾಯ ತಾಲ್ಲೂಕು, ಹಾಸನ ಜಿಲ್ಲೆ ಇವರು ನೋಟರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ದಿನಾಂಕ:24–01–2015 ರಿಂದ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ ಮತ್ತು ಸದರಿಯವರ ಹೆಸರನ್ನು ನೋಟರಿ ಕಾಯ್ದೆ 1952ರ ಕಲಂ 10(ಎ) ರೀತ್ಯಾ ನೋಟರಿ ರಿಜಿಸ್ಟರ್‌ನಿಂದ ಶಾಶ್ವತವಾಗಿ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಾಯೀದಾ ಬಾನು**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ–2)

**P.R.243**

**SC-15**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

### ಅಧಿಕೃತ ಜ್ಞಾಪನ

**ಸಂಖ್ಯೆ : ಯೋಇ 73 ಯೋವಿವಿ 2014 ಬೆಂಗಳೂರು, ದಿನಾಂಕ: 11–03–2015**

**ವಿಷಯ :** ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯ ಮಾರ್ಗಸೂಚಿಗಳಿಗೆ ಸೇರ್ಪಡೆ ಮಾಡುವ ಬಗ್ಗೆ

**ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆ (KLLADS) ಯಡಿಯಲ್ಲಿ ಮೇ 2014ರ ಪರಿಷ್ಕೃತ ಮಾರ್ಗಸೂಚಿಗಳ ಕಂಡಿಕೆ–6.4ನ್ನು ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.**

" ಯಾವುದೇ ಒಂದು ನೋಂದಾಯಿತ ಸೊಸೈಟಿ ಅಥವಾ ಟ್ರಸ್ಟ್‌ನ ಒಂದು ಅಥವಾ ಹೆಚ್ಚಿನ ಕಾಮಗಾರಿಗಳಿಗೆ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ನಿಧಿಯಿಂದ ಆಯಾ ಶಾಸಕರ ಒಂದು ವರ್ಷದ ಅನುದಾನದ ಶೇಕಡ 15ರಷ್ಟು ಅಥವಾ ಗರಿಷ್ಠ ರೂ.30.00 ಲಕ್ಷಕ್ಕಿಂತ ಹೆಚ್ಚಿನ ಅನುದಾನ ನೀಡಬಾರದು. ಈ ಹಿಂದೆ ಯಾವುದೇ ಒಂದು ಸೊಸೈಟಿ ಅಥವಾ ಟ್ರಸ್ಟ್ ತನ್ನ ಜೀವಾವಧಿಯಲ್ಲಿ ಈ ನಿಧಿಯ ಶೇಕಡ 15 ರಷ್ಟನ್ನು ಪಡೆದಿದ್ದರೆ ಈ ನಿಧಿಯಡಿ ಪುನಃ ಅನುದಾನ ಪಡೆಯಲು ಅರ್ಹತೆ ಇರುವುದಿಲ್ಲ. ಮುಂದುವರಿದು, ಆಯಾ ಕ್ಷೇತ್ರದ ವಿಧಾನಸಭಾ ಸದಸ್ಯರು ಮತ್ತು ಇತರೆ ವಿಧಾನ ಪರಿಷತ್ ಸದಸ್ಯರುಗಳ ಒಟ್ಟು ಮೊತ್ತ ಸೇರಿ ರೂ.30.00 ಲಕ್ಷಗಳನ್ನು ಮೀರಬಾರದು."

6.6. ವಿಧಾನಸಭಾ ಸದಸ್ಯರು ಮತ್ತು ವಿಧಾನ ಪರಿಷತ್ ಸದಸ್ಯರುಗಳಿಗೆ ಹಂಚಿಕೆಯಾಗಿರುವ ಅನುದಾನದಲ್ಲಿ ವಾರ್ಷಿಕ ರೂ.30.00 ಲಕ್ಷಗಳ ಮಿತಿಯಲ್ಲಿ ಸೋಲಾರ್ ಬೀದಿ ದೀಪ, ಸಾರ್ವಜನಿಕ ಸ್ಥಳಗಳಲ್ಲಿ ಹೈಮಾಸ್ಕ್ ಲೈಟ್ ಮತ್ತು ಸಿಸಿ ಕ್ಯಾಮೆರಾಗಳನ್ನು ಅಳವಡಿಸಲು ಅವಕಾಶ ಕಲ್ಪಿಸಿದೆ.

6.7 ವಿಧಾನಸಭಾ ಶಾಸಕರು ತಮ್ಮದೇ ಜಿಲ್ಲೆಯ ಇತರೆ ವಿಧಾನಸಭಾ ಕ್ಷೇತ್ರಗಳಲ್ಲಿ ಅತ್ಯವಶ್ಯವೆನಿಸಿದ ಸಾರ್ವಜನಿಕ ಮೂಲಭೂತ ಸೌಕರ್ಯಗಳಾದಂತಹ ಜಿಲ್ಲಾ ರಂಗಮಂದಿರ ನಿರ್ಮಾಣ, ಬ್ಲಡ್ ಬ್ಯಾಂಕ್, ಜಿಲ್ಲಾ ಆಸ್ಪತ್ರೆಗಳಲ್ಲಿ ತುರ್ತು ಚಿಕಿತ್ಸಾ ಘಟಕ ಸ್ಥಾಪನೆ (ICU) ಡಯಾಲಿಸಿಸ್ ಕೇಂದ್ರ, ಜಿಲ್ಲಾ ಕ್ರೀಡಾಂಗಣ ನಿರ್ಮಾಣ ಮತ್ತು ಜಿಲ್ಲಾ ಗ್ರಂಥಾಲಯಗಳಿಗೆ ವಾರ್ಷಿಕ ರೂ.5.00 ಲಕ್ಷಗಳನ್ನು ಒದಗಿಸಲು ಅವಕಾಶ ಕಲ್ಪಿಸಿದೆ.

**ಈ ಕೆಳಕಂಡ ಕಾಮಗಾರಿಗಳನ್ನು ಕೈಗೊಳ್ಳಲು ಮಾರ್ಗಸೂಚಿಗಳಲ್ಲಿ ಅವಕಾಶ ಕಲ್ಪಿಸಿ ಮಾರ್ಗಸೂಚಿಗಳ ಅನುಬಂಧ–III ರಲ್ಲಿ ಸೇರ್ಪಡೆ ಮಾಡಲಾಗಿದೆ.**

17. ಅರೆ–ಮುಜರಾಯಿ ದೇವಸ್ಥಾನಗಳಿಗೆ ಸೀಮಿತಗೊಳಿಸಿ ನಿರ್ಮಾಣ/ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಅವಕಾಶ ಕಲ್ಪಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರಫೀ ಅಹಮದ್. ಎಂ.ಎಸ್.**

ಸರ್ಕಾರದ ಅಧೀನ ಕಾರ್ಯದರ್ಶಿ–1&2

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

**P.R.244**

**SC-1000**

## ಕಂದಾಯ ಸಚಿವಾಲಯ

**ವಿಷಯ :** ಸೋಮವಾರಪೇಟೆ ಹೋಬಳಿ, ಸಂಗಯ್ಯನಪುರ ಗ್ರಾಮದ ಸ.ನಂ.7/1ರಲ್ಲಿ 1–00 ಎಕರೆ ಜಾಗವನ್ನು ಶ್ರೀ ಎಂ. ವೆಂಕಟೇಶ್ ಮಾಜಿ ಸೈನಿಕರಿಗೆ ಮಂಜೂರಾತಿ ಮಾಡಿರುವ ಬಗ್ಗೆ.

**ಓದಲಾಗಿದೆ :**

(1) ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 69 ಎಲ್‌ಜಿಒ 2010 ದಿನಾಂಕ: 18–04–2011

(2) ಮಾನ್ಯ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 31625–26/2011 ದಿನಾಂಕ: 10–01–2013.

(3) ಮಾನ್ಯ ಉಚ್ಚ ನ್ಯಾಯಾಲಯದ ಸಿ.ಸಿ.ಸಿ. (ಸಿವಿಲ್) ಸಂಖ್ಯೆ: 1412/2013 ದಿನಾಂಕ: 19–11–2013.

(4) ಜಿಲ್ಲಾಧಿಕಾರಿ ಕೊಡಗು ಜಿಲ್ಲೆ ರವರ ಪತ್ರ ಸಂಖ್ಯೆ: (2) ಜಾಗ/75/2006–07 ದಿನಾಂಕ: 29–11–2013.

(5) ಸರ್ಕಾರದ ಆದೇಶ ದಿನಾಂಕ: 18–12–2013.

(6) ತಹಶೀಲ್ದಾರ್ ಸೋಮವಾರಪೇಟೆ ತಾಲ್ಲೂಕುರವರ ಆದೇಶ ಸಂಖ್ಯೆ: ಜಾಗ/169/2004–05 ದಿನಾಂಕ: 30–05–2014.

(7) ಜಿಲ್ಲಾಧಿಕಾರಿ ಕೊಡಗು ಜಿಲ್ಲೆ ಮಡಿಕೇರಿ ರವರ ಪತ್ರ ಸಂಖ್ಯೆ: ಜಾಗ (2)ಇ/75/2006–04 ದಿನಾಂಕ: 23–06–2014.

**ಪ್ರಸ್ತಾವನೆ :**

ಶ್ರೀ ಎಂ. ವೆಂಕಟೇಶ್ ಮಾಜಿ ಸೈನಿಕರು, ಇವರು ಸೇನೆಯಲ್ಲಿ ಸೈನಿಕರ ಪೂರ್ಣಸೇವೆಯನ್ನು ಸಲ್ಲಿಸಿರುವುದಿಲ್ಲವಾದ್ದರಿಂದ ಇವರಿಗೆ ಮಾಜಿ ಸೈನಿಕರ ಕೋಟಾದಡಿ ಜಮೀನು ಮಂಜೂರು ಮಾಡುವುದು ಸೂಕ್ತವೆನಿಸುವುದಿಲ್ಲವೆಂಬ ಕಾರಣದಿಂದ ಮೇಲೆ ಓದಲಾದ ಕ್ರಮ ಸಂಖ್ಯೆ: (1)ರಲ್ಲಿ ಪ್ರಸ್ತಾವನೆಯನ್ನು ತಿರಸ್ಕರಿಸಿದ್ದರ ಹಿನ್ನಲೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ: (2) ಮತ್ತು (3)ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ನೀಡಿರುವ ಆದೇಶಗಳನುಸಾರ ಮೇಲೆ ಓದಲಾದ ಕ್ರಮಸಂಖ್ಯೆ (4) ರಲ್ಲಿ ಜಿಲ್ಲಾಧಿಕಾರಿ ಕೊಡಗು ಜಿಲ್ಲೆರವರು ಶ್ರೀ ಎಂ. ವೆಂಕಟೇಶ್ ಮಾಜಿ ಸೈನಿಕರು ಇವರಿಗೆ ಸೋಮವಾರಪೇಟೆ ಹೋಬಳಿ, ಸಂಗಯ್ಯನಪುರ ಗ್ರಾಮದ ಸ.ನಂ. 7/1ರಲ್ಲಿ 1–50 ಎಕರೆ/ಸೆಂಟ್ಸ್ ಜಮೀನನ್ನು ಮಂಜೂರು ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಮೇಲೆ ಓದಲಾದ ಕ್ರಮಸಂಖ್ಯೆ (5)ರಲ್ಲಿ ಕೊಡಗು ಜಿಲ್ಲೆ, ಸೋಮವಾರಪೇಟೆ ತಾಲ್ಲೂಕು, ಸೋಮವಾರಪೇಟೆ ಹೋಬಳಿ, ಸಂಗಯ್ಯನಪುರ ಗ್ರಾಮದ ಸ.ನಂ. 7/1ರಲ್ಲಿ 1–00 ಎಕರೆ ಜಮೀನನ್ನು ಶ್ರೀ ವೆಂಕಟೇಶ್ ಬಿನ್ ಮುನಿಶ್ವಾಮಪ್ಪ ಮಾಜಿ ಸೈನಿಕರು, ಹೆಣಗಲು ಗ್ರಾಮ ಇವರಿಗೆ ಮಾಜಿ ಸೈನಿಕರ ಕೋಟಾದಡಿ ಕರ್ನಾಟಕ ಭೂ ಮಂಜೂರಾತಿ ಅಧಿನಿಯಮ 1969ರ ನಿಯಮ 3,4 ಮತ್ತು 5 ರನ್ವಯ ನಿಗಧಿಪಡಿಸಿರುವ ನಿಬಂಧನೆಗಳನ್ನು ಪೂರೈಸುವ ಷರತ್ತಿಗೊಳಪಟ್ಟು ಮಂಜೂರು ಮಾಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (6)ರಲ್ಲಿ ತಹಶೀಲ್ದಾರ್ ಸೋಮವಾರಪೇಟೆ ತಾಲ್ಲೂಕು ರವರು ದಿನಾಂಕ: 18–12–2013ರ ಸರ್ಕಾರದ ಆದೇಶದಂತೆ ವಿಧಿಸಿದ ಷರತ್ತುಗಳಿಗೆ ಬದ್ಧರಾಗಿರುವಂತೆ ಪ್ರಮಾಣ ಪತ್ರಗಳನ್ನು ಹಾಜರುಪಡಿಸುವಂತೆ ಮಂಜೂರಾತಿದಾರರಿಗೆ ನೋಟೀಸು ನೀಡಲು ಉತ್ತರವಾಗಿ ಶ್ರೀ ಎಂ. ವೆಂಕಟೇಶ್ ರವರು ಪತ್ನಿ ಶ್ರೀಮತಿ ಚೆನ್ನಮ್ಮ ರವರು ನನ್ನ ಪತಿ ಶ್ರೀ ಎಂ. ವೆಂಕಟೇಶ್ ರವರು ದಿನಾಂಕ:06–10–2013 ರಂದು ಮೃತರಾಗಿದ್ದು, ಈ ಬಗ್ಗೆ ನನ್ನನ್ನು ಮತ್ತು ಮಕ್ಕಳನ್ನು ಎಲ್‌ಆರ್‌ಗಳಾಗಿ ಮಾಡಬೇಕೆಂದು ಸಂಬಂಧಪಟ್ಟ ದಾಖಲಾತಿಗಳೊಂದಿಗೆ, ಮಾನ್ಯ ನ್ಯಾಯಾಲಯವನ್ನು ಕೋರಿರುತ್ತೇವೆಂದು ತಿಳಿಸಿರುತ್ತಾರೆ. ಆದರೆ, ಮೃತ ಮಂಜೂರಿದಾರರ ಹೆಸರಿನಲ್ಲಿ ಸರ್ಕಾರವು ದಿನಾಂಕ: 18–12–2013 ರಂದು ಆದೇಶ ಹೊರಡಿಸಿದ್ದು, ಸದರಿ ಆದೇಶವನ್ನು ತಿದ್ದುಪಡಿ ಮಾಡಲು ತಹಶೀಲ್ದಾರ್ ಸೋಮವಾರಪೇಟೆ ತಾಲ್ಲೂಕುರವರು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (7)ರಲ್ಲಿ ಜಿಲ್ಲಾಧಿಕಾರಿ ಕೊಡಗು ಜಿಲ್ಲೆರವರು ತಹಶೀಲ್ದಾರ್ ಸೋಮವಾರಪೇಟೆ ರವರ ಕೋರಿಕೆಯಂತೆ ದಿನಾಂಕ: 18–12–2013ರ ಸರ್ಕಾರದ ಆದೇಶದಲ್ಲಿ ಶ್ರೀ ಎಂ. ವೆಂಕಟೇಶ್ ರವರ ಪತ್ನಿಯಾದ ಶ್ರೀಮತಿ ಚೆನ್ನಮ್ಮ ರವರ ಹೆಸರಿನಲ್ಲಿ ತಿದ್ದುಪಡಿ ಆದೇಶ ಹೊರಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ಅದರಂತೆ ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 46 ಎಲ್.ಜಿ.ಒ 2013, ಬೆಂಗಳೂರು ದಿನಾಂಕ: 05–03–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕೊಡಗು ಜಿಲ್ಲೆ, ಸೋಮವಾರಪೇಟೆ ತಾಲ್ಲೂಕು, ಸೋಮವಾರಪೇಟೆ ಹೋಬಳಿ, ಸಂಗಯ್ಯನಪುರ ಗ್ರಾಮದ ಸ.ನಂ. 7/1ರಲ್ಲಿ 1–00 ಎಕರೆ ಜಮೀನನ್ನು ಶ್ರೀ ವೆಂಕಟೇಶ್ ಬಿನ್ ಮುನಿಶ್ವಾಮಪ್ಪ ಮಾಜಿ ಸೈನಿಕರು, ಹೆಣಗಲು ಗ್ರಾಮ ಸೋಮವಾರಪೇಟೆ ತಾಲ್ಲೂಕು, ಇವರಿಗೆ ಮಂಜೂರು ಮಾಡಿ ದಿನಾಂಕ: 18–12–2013 ರಂದು ಆದೇಶ ಹೊರಡಿಸಲಾಗಿತ್ತು. ಶ್ರೀ ವೆಂಕಟೇಶ್‌ರವರು ಮೃತರಾಗಿರುವ ಹಿನ್ನಲೆಯಲ್ಲಿ ದಿನಾಂಕ: 18–12–2013ರ ಆದೇಶವನ್ನು ಹಿಂದಕ್ಕೆ ಪಡೆದು ಇವರ ಪತ್ನಿ ಶ್ರೀಮತಿ ಚೆನ್ನಮ್ಮ ಇವರ ಹೆಸರಿಗೆ ಮಾಜಿ ಸೈನಿಕರ ಕೋಟಾದಡಿ ಕರ್ನಾಟಕ ಭೂ ಮಂಜೂರಾತಿ ಅಧಿನಿಯಮ 1969ರ ನಿಯಮ 3, 4, ಮತ್ತು 5 ರನ್ವಯ ನಿಗದಿಪಡಿಸಿರುವ ನಿಬಂಧನೆಗಳನ್ನು ಪೂರೈಸುವ ಷರತ್ತಿಗೊಳಪಟ್ಟು ಮಂಜೂರು ಮಾಡಲಾಗಿದೆ.

ಕಾನೂನು ಇಲಾಖೆಯ ಎಲ್‌ಎಡ್ಲ್ಯೂ 534 ಒಪಿಎನ್ 2014 ದಿನಾಂಕ: 13–10–2014ರ ಅಭಿಪ್ರಾಯದಂತೆ ಹೊರಡಿಸಲಾಗಿದೆ).

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–1)

**P.R.247**

**SC-50**

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ:** ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ತೆರೆಯಲಾಗಿರುವ ಹೊಸ ಪಶುಚಿಕಿತ್ಸಾಲಯಗಳಿಗೆ ಸ್ಥಳ ಗುರುತಿಸುವುದು ಹಾಗೂ ಮೇಲ್ದರ್ಜೆಗೇರಿಸಲಾಗಿರುವ ಪಶುಚಿಕಿತ್ಸಾಲಯಗಳಿಗೆ ಸಂಸ್ಥೆಗಳನ್ನು ಗುರುತಿಸುವ ಕುರಿತು.

**ಓದಲಾಗಿದೆ:** 1. ಪತ್ರ ಸಂಖ್ಯೆ: ಆಪಸಂ/ಡಿವಿಡಿ-3/ವಿವ-12/ಹೊಸಪ.ಚಿ/ಪ್ರಾ.ಪ.ಚಿ/ಮೇ.ದರ್ಜೆ/ 20013-14, ದಿನಾಂಕ: 04-07-2014.

2. ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014, ದಿನಾಂಕ: 24-12-2014.

**ಪ್ರಸ್ತಾವನೆ:**

ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ ರಾಜ್ಯದಲ್ಲಿ ಒಟ್ಟು 4112 ಪಶುವೈದ್ಯಕೀಯ ಸಂಸ್ಥೆಗಳು ಇದ್ದು, ಇದರಲ್ಲಿ 364 ಪಶು ಆಸ್ಪತ್ರೆಗಳು, 1943 ಪಶು ಚಿಕಿತ್ಸಾಲಯಗಳು ಮತ್ತು 1181 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳು ಜಿಲ್ಲಾ ಪಂಚಾಯಿತಿ ಅಡಿ ಕಾರ್ಯ ನಿರ್ವಹಿಸುತ್ತಿರುವುದಾಗಿ ತಿಳಿಸಿ, 2014-15ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಹೊಸದಾಗಿ 100 ಪಶುಚಿಕಿತ್ಸಾಲಯಗಳನ್ನು ತೆರೆಯಲು ಹಾಗೂ 100 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ರೂ.10.00 ಕೋಟಿಗಳ ಅನುದಾನವನ್ನು ಒದಗಿಸುವುದಾಗಿ ಘೋಷಣೆಯಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ರಾಜ್ಯಾದ್ಯಂತ 100 ಹೊಸ ಪಶುಚಿಕಿತ್ಸಾಲಯಗಳನ್ನು ತೆರೆಯಲು ಹಾಗೂ 100 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ಮಂಜೂರಾತಿ ನೀಡಲಾಗಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, 2014-15 ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014 ದಿನಾಂಕ: 24-12-2014 ರನ್ವಯ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ರಾಜ್ಯಾದ್ಯಂತ ತೆರೆಯಲಾಗಿರುವ ಹೊಸ ಪಶುಚಿಕಿತ್ಸಾಲಯಗಳಿಗೆ ಸ್ಥಳಗಳನ್ನು ಗುರುತಿಸಲು ಹಾಗೂ ಮೇಲ್ದರ್ಜೆಗೇರಿಸಲಾಗಿರುವ ಪಶುಚಿಕಿತ್ಸಾಲಯಗಳಿಗೆ ಸಂಸ್ಥೆಗಳನ್ನು ಗುರುತಿಸಲು ತೀರ್ಮಾನಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014, ದಿನಾಂಕ: 04-02-2015.**

ಮೇಲ್ಕಂಡ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014, ದಿನಾಂಕ: 24-12-2014 ರನ್ವಯ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ರಾಜ್ಯಾದ್ಯಂತ 100 ಹೊಸ ಪಶುಚಿಕಿತ್ಸಾಲಯಗಳನ್ನು ತೆರೆಯಲು ಹಾಗೂ 100 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ಮಂಜೂರಾತಿ ನೀಡಲಾಗಿದ್ದು, ಸದರಿ ಆದೇಶದನ್ವಯ ಹೊಸದಾಗಿ ತೆರೆಯಲಾಗಿರುವ 75 ಪಶುಚಿಕಿತ್ಸಾಲಯಗಳಿಗೆ ಇದರೊಂದಿಗೆ ಲಗತ್ತಿಸಿರುವ **ಅನುಬಂಧ-1** ರಲ್ಲಿರುವಂತೆ ಸ್ಥಳಗಳನ್ನು ಗುರುತಿಸಲಾಗಿದೆ ಹಾಗೂ ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಿರುವ 69 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು **ಅನುಬಂಧ-2** ರಲ್ಲಿರುವಂತೆ ಗುರುತಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಪ್ರಸನ್ನ,**

ಪೀಠಾಧಿಕಾರಿ -2,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ.

(ಪಶುಸಂಗೋಪನೆ-ಎ)

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014, ಬೆಂಗಳೂರು, ದಿನಾಂಕ: 04-02-2015ಕ್ಕೆ ಅನುಬಂಧ-1**

**ಹೊಸದಾಗಿ ಪಶುಚಿಕಿತ್ಸಾಲಯಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡಿರುವ ಗ್ರಾಮಗಳ ಪಟ್ಟಿ**

| ಕ್ರ. ಸಂ. | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಹೊಸದಾಗಿ ಪಶುಚಿಕಿತ್ಸಾಲಯಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡುವ ಗ್ರಾಮಗಳ ಹೆಸರು |
|---|---|---|---|
| 1. | ಬಾಗಲಕೋಟೆ | ಬಾದಾಮಿ | ನೀರಲಕೇರಿ |
| 2. | ಬಾಗಲಕೋಟೆ | ಜಮಖಂಡಿ | ಅಸಂಗಿ |
| 3. | ಬಾಗಲಕೋಟೆ | ಮುಧೋಳ | ಧವಳೇಶ್ವರ |
| 4. | ಬೆಳಗಾವಿ | ರಾಯಭಾಗ | ನೀಲಜಿ |
| 5. | ಬೆಳಗಾವಿ | ಅಥಣಿ | ರೆಡ್ಡೇರಹಟ್ಟಿ |
| 6. | ಬೆಳಗಾವಿ | ಗೋಕಾಕ | ಮೇಲ್ಮನಹಟ್ಟಿ |
| 7. | ಬೆಳಗಾವಿ | ಚಿಕ್ಕೋಡಿ | ಶಿರಗಾಂವ್ |
| 8. | ಬೆಳಗಾವಿ | ಖಾನಾಪುರ | ಮಹಾಡಿಗುಂಜಿ |
| 9. | ಬೆಳಗಾವಿ | ಹುಕ್ಕೇರಿ | ಅಕ್ಕಿಆಲೂರು |
| 10. | ಬೆಳಗಾವಿ | ರಾಮದುರ್ಗ | ಲಿಂಗದಾಳ್ |
| 11. | ಬೆಳಗಾವಿ | ಪರಸಗಡ/ಸವದತ್ತಿ | ಮದಲೂರು |

| | | | |
|---|---|---|---|
| 12. | ಬಳ್ಳಾರಿ | ಕೂಡ್ಲಿಗಿ | ಚಂದ್ರಶೇಖರಪುರ |
| 13. | ಬಳ್ಳಾರಿ | ಸಂಡೂರು | ಶೆಲಿಯಪ್ಪನಹಳ್ಳಿ |
| 14. | ಬಳ್ಳಾರಿ | ಹಗರಿಬೊಮ್ಮನಹಳ್ಳಿ | ದಶಮಾಪುರ |
| 15. | ಬಳ್ಳಾರಿ | ಹೊಸಪೇಟೆ | ಸುಗ್ಗೇನಹಳ್ಳಿ |
| 16. | ಬಳ್ಳಾರಿ | ಸಿರಗುಪ್ಪ | ರಾವಿಹಾಳ್ |
| 17. | ಬಳ್ಳಾರಿ | ಬಳ್ಳಾರಿ | ಕೊಳೂರು |
| 18. | ಬೀದರ್ | ಔರಾದ್ | ದಾಬಕಾ |
| 19. | ಬಿಜಾಪುರ | ಬಸವನಬಾಗೇವಾಡಿ | ಹೆಬ್ಬಾಳ |
| 20. | ಬಿಜಾಪುರ | ಬಿಜಾಪುರ | ಟಕ್ಕಲಕಿ |
| 21. | ಬಿಜಾಪುರ | ಇಂಡಿ | ದೇವರಗೆಣ್ಣೂರು |
| 22. | ಬಿಜಾಪುರ | ಇಂಡಿ | ಬಸನಾಳ |
| 23. | ಬಿಜಾಪುರ | ಸಿಂಧಗಿ | ಚಿಕ್ಕರೊಗಿ |
| 24. | ಚಾಮರಾಜನಗರ | ಚಾಮರಾಜನಗರ | ತೋಮೆಯಾರ್ ಪಾಳ್ಯ |
| 25. | ಚಾಮರಾಜನಗರ | ಕೊಳ್ಳೇಗಾಲ | ಹೊಸಮಾಲಂಗಿ |
| 26. | ಚಿಕ್ಕಬಳ್ಳಾಪುರ | ಗೌರಿಬಿದನೂರು | ಹಳೇಹಳ್ಳಿ |
| 27. | ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | ಬೊಮ್ಮನಹಳ್ಳಿ |
| 28. | ಚಿಕ್ಕಬಳ್ಳಾಪುರ | ಚಿಂತಾಮಣಿ | ಮುಂಗಾನಹಳ್ಳಿ |
| 29. | ಚಿಕ್ಕಮಗಳೂರು | ಶೃಂಗೇರಿ | ಕಿಗ್ಗಾ |
| 30. | ಚಿಕ್ಕಮಗಳೂರು | ತರೀಕೆರೆ | ಮುಂಡ್ರೆ |
| 31. | ಚಿತ್ರದುರ್ಗ | ಹೊಳಲ್ಕೆರೆ | ಹಿರೇ ಎಮ್ಮಿಗನೂರು |
| 32. | ಚಿತ್ರದುರ್ಗ | ಮೊಳಕಾಲ್ಮೂರು | ದೇವಸಮುದ್ರ |
| 33. | ಚಿತ್ರದುರ್ಗ | ಚಳ್ಳಕೆರೆ | ಗೌರಸಮುದ್ರ |
| 34. | ಚಿತ್ರದುರ್ಗ | ಹೊಸದುರ್ಗ | ಚಿಕ್ಕಬ್ಯಾಲದಕೆರೆ |
| 35. | ಚಿತ್ರದುರ್ಗ | ಚಿತ್ರದುರ್ಗ | ಮುದ್ದಾಪುರ |
| 36. | ಚಿತ್ರದುರ್ಗ | ಹಿರಿಯೂರು | ಮರಡಿಹಳ್ಳಿ |
| 37. | ದಾವಣಗೆರೆ | ಹರಪನಹಳ್ಳಿ | ಜಂಗಮತುಂಬಿಗೆರೆ |
| 38. | ದಾವಣಗೆರೆ | ಚನ್ನಗಿರಿ | ಗುಡ್ಡದಕೊಮರನಹಳ್ಳಿ |
| 39. | ಧಾರವಾಡ | ಕಲಘಟಗಿ | ಬೀರವಳ್ಳಿ |
| 40. | ಧಾರವಾಡ | ಧಾರವಾಡ | ಕೊಟಬಾಗಿ |
| 41. | ಹಾಸನ | ಅರಸೀಕೆರೆ | ರಂಗಾಪುರ, ಗಂಡಸಿ ಹೋಬಳಿ |
| 42. | ಹಾವೇರಿ | ಬ್ಯಾಡಗಿ | ಕಾಗಿನೆಲೆ |
| 43. | ಹಾವೇರಿ | ರಾಣೇಬೆನ್ನೂರು | ಕಾಕೋಳ್ |
| 44. | ಕೋಲಾರ | ಬಂಗಾರಪೇಟೆ | ಜೆ.ಕೆ.ಪುರ |
| 45. | ಕೋಲಾರ | ಶ್ರೀನಿವಾಸಪುರ | ಪುಲಗರಕೋಟೆ |
| 46. | ಕೊಪ್ಪಳ | ಕೊಪ್ಪಳ | ಚಿಕ್ಕಬಗನಾಳ |
| 47. | ಕೊಪ್ಪಳ | ಗಂಗಾವತಿ | ಚಿಕ್ಕಮಾದಿಹಾಳ |
| 48. | ಕೊಪ್ಪಳ | ಕುಷ್ಠಗಿ | ತುಗ್ಗಲದೋಣಿ |
| 49. | ಮಂಡ್ಯ | ಕೆ.ಆರ್.ಪೇಟೆ | ಸಾಸಲು |
| 50. | ಮಂಡ್ಯ | ಪಾಂಡವಪುರ | ರಾಗಿಮುದ್ದನಹಳ್ಳಿ |
| 51. | ಮೈಸೂರು | ಹೆಚ್.ಡಿ.ಕೋಟೆ | ಕಂಟೆಮಳ್ಳಿ |
| 52. | ಮೈಸೂರು | ಹುಣಸೂರು | ಗುರುಪುರ |
| 53. | ಮೈಸೂರು | ಕೆ.ಆರ್.ನಗರ | ಹಾಡ್ಯ |

| | | | |
|---|---|---|---|
| 54. | ಮೈಸೂರು | ಮೈಸೂರು | ದೂರ |
| 55. | ಮೈಸೂರು | ಮೈಸೂರು | ಚಾಮುಂಡಿಬೆಟ್ಟದ ತಪ್ಪಲು |
| 56. | ಮೈಸೂರು | ನಂಜನಗೂಡು | ಚಿನ್ನದಗುಡಿ ಹುಂಡಿ |
| 57. | ಮೈಸೂರು | ಟಿ.ನರಸೀಪುರ | ವಾಟಾಳ್ |
| 58. | ರಾಯಚೂರು | ಲಿಂಗಸುಗೂರು | ಜಂಗಿರಾಂಪುರ ತಾಂಡ |
| 59. | ರಾಮನಗರ | ಚನ್ನಪಟ್ಟಣ | ಎಂ.ಬಿ.ಹಳ್ಳಿ |
| 60. | ರಾಮನಗರ | ಮಾಗಡಿ | ವರದೇನಹಳ್ಳಿ ಹ್ಯಾಂಡ್ ಪೋಸ್ಟ್ |
| 61. | ರಾಮನಗರ | ಕನಕಪುರ | ಕುಚುವನಹಳ್ಳಿ |
| 62. | ಶಿವಮೊಗ್ಗ | ಶಿವಮೊಗ್ಗ | ಸೋಮಿನಕೊಪ್ಪ |
| 63. | ಶಿವಮೊಗ್ಗ | ಶಿಕಾರಿಪುರ | ಮಡುವಸಿದ್ದಾಪುರ |
| 64. | ಶಿವಮೊಗ್ಗ | ತೀರ್ಥಹಳ್ಳಿ | ರಾಮಕೃಷ್ಣಾಪುರ |
| 65. | ತುಮಕೂರು | ತಿಪಟೂರು | ನಾಗರಘಟ್ಟ |
| 66. | ತುಮಕೂರು | ಪಾವಗಡ | ಗುಜ್ಜನಡು |
| 67. | ತುಮಕೂರು | ಶಿರಾ | ಹೆತ್ತಪ್ಪನಹಟ್ಟಿ |
| 68. | ತುಮಕೂರು | ಶಿರಾ | ಕರೇಕ್ಯಾತನಹಳ್ಳಿ |
| 69. | ತುಮಕೂರು | ಶಿರಾ | ಬೆಂಚ್‌ಗೇಟ್ |
| 70. | ತುಮಕೂರು | ಚಿಕ್ಕನಾಯಕನಹಳ್ಳಿ | ಗೋಡೆಕೆರೆ |
| 71. | ತುಮಕೂರು | ಚಿಕ್ಕನಾಯಕನಹಳ್ಳಿ | ಹೊಯ್ಸಲ ಕಟ್ಟೆ |
| 72. | ಉತ್ತರಕನ್ನಡ | ಹೊನ್ನಾವರ | ಗುಂಡಬಾಳು |
| 73. | ಉತ್ತರಕನ್ನಡ | ಕುಮುಟಾ | ಹೊಸದ |
| 74. | ಯಾದಗಿರಿ | ಸುರಪುರ | ಹೆಮನೂರು |
| 75. | ಯಾದಗಿರಿ | ಯಾದಗಿರಿ | ಬೆಳಗರ |

**ಹೆಚ್.ಪ್ರಸನ್ನ,**
ಪೀಠಾಧಿಕಾರಿ –2,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ.
(ಪಶುಸಂಗೋಪನೆ–ಎ)

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014, ಬೆಂಗಳೂರು, ದಿನಾಂಕ: 04–02–2015ಕ್ಕೆ ಅನುಬಂಧ–2**

**ಪ್ರಾಥಮಿಕ ಪಶು ಚಿಕಿತ್ಸಾ ಕೇಂದ್ರಗಳು/ಕೃ.ಗ.ಉ.ಕೇಂ.ಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಿರುವ ಸ್ಥಳಗಳು**

| ಕ್ರ ಸಂ. | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಬೇಕಾದ ಸಂಸ್ಥೆಯ ಹೆಸರು |
|---|---|---|---|
| 1 | ಬಾಗಲಕೋಟೆ | ಹುನಗುಂದ | ಪ್ರಾಪಚಿ, ಚಿತ್ತವಾಡಗಿ |
| 2 | ಬಾಗಲಕೋಟೆ | ಬಾಗಲಕೋಟೆ | ಪ್ರಾಪಚಿ, ಬೆಣ್ಣೂರು |
| 3 | ಬೆಂಗಳೂರು ಗ್ರಾಮಾಂತರ | ದೇವನಹಳ್ಳಿ | ಪ್ರಾಪಚಿ, ಕುಂದಾಣ |
| 4 | ಬೆಂಗಳೂರು ಗ್ರಾಮಾಂತರ | ನೆಲಮಂಗಲ | ಪ್ರಾಪಚಿ, ಶಿವಗಂಗೆ |
| 5 | ಬೆಳಗಾವಿ | ಸಂಪಗಾಂವ್/ ಬೈಲಹೊಂಗಲ | ಪ್ರಾಪಚಿ, ತುರಮರಿ |
| 6 | ಬೆಳಗಾವಿ | ಖಾನಾಪುರ | ಕೃ.ಗ.ಕೇಂ, ಬೀಡಿ |
| 7 | ಬೆಳಗಾವಿ | ಪರಸಗಡ/ಸವದತ್ತಿ | ಕೃ.ಗ.ಉ.ಕೇಂ, ಶಿರಸಂಗಿ |
| 8 | ಬೆಳಗಾವಿ | ರಾಮದುರ್ಗ | ಪ್ರಾಪಚಿ, ಮಾಗನೂರು |
| 9 | ಬಳ್ಳಾರಿ | ಹೊಸಪೇಟೆ | ಕು.ಉ.ವಿ.ಕೇಂ, ಗಾದಿಗನೂರು |
| 10 | ಬಿಜಾಪುರ | ಬಿಜಾಪುರ | ಕೃ.ಗ.ವಿ.ಕೇಂ, ಮಮದಾಪುರ |
| 11 | ಬಿಜಾಪುರ | ಇಂಡಿ | ಪ್ರಾಪಚಿ, ಬಟಗುನಾಕಿ |
| 12 | ಬಿಜಾಪುರ | ಸಿಂಧಗಿ | ಪ್ರಾಪಚಿ, ಗೂಲಗೇರಿ |

| | | | |
|---|---|---|---|
| 13 | ಬಿಜಾಪುರ | ಬಸವನಬಾಗೇವಾಡಿ | ಪ್ರಾಪಚಿ, ಸಾತಿಹಾಳ–ಮಲಘಾಣ |
| 14 | ಚಾಮರಾಜನಗರ | ಗುಂಡ್ಲುಪೇಟೆ | ಪ್ರಾಪಚಿ, ಶಿವಪುರ |
| 15 | ಚಾಮರಾಜನಗರ | ಚಾಮರಾಜನಗರ | ಕೃ.ಗ.ಉ.ಕೇಂ, ಚಂದಕವಾಡಿ |
| 16 | ಚಿತ್ರದುರ್ಗ | ಚಳ್ಳಕೆರೆ | ಪ್ರಾಪಚಿ, ದೊಡ್ಡಬೀರನಹಳ್ಳಿ |
| 17 | ಚಿತ್ರದುರ್ಗ | ಹಿರಿಯೂರು | ಪ್ರಾಪಚಿ, ಬೇತೂರು |
| 18 | ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | ಪ್ರಾಪಚಿ, ದಿಬ್ಬೂರು |
| 19 | ಚಿಕ್ಕಬಳ್ಳಾಪುರ | ಗುಡಿಬಂಡೆ | ಪ್ರಾಪಚಿ, ಹಂಪಸಂದ್ರ |
| 20 | ಚಿಕ್ಕಮಗಳೂರು | ಚಿಕ್ಕಮಗಳೂರು | ಪ್ರಾಪಚಿ, ಮಲ್ಲೇನಹಳ್ಳಿ |
| 21 | ಚಿಕ್ಕಮಗಳೂರು | ಕೊಪ್ಪ | ಪ್ರಾಪಚಿ, ಶಾಂತಿಗ್ರಾಮ |
| 22 | ಚಿಕ್ಕಮಗಳೂರು | ಎನ್.ಆರ್.ಪುರ | ಪ್ರಾಪಚಿ, ಬೆಳ್ಳೂರು |
| 23 | ದಕ್ಷಿಣ ಕನ್ನಡ | ಬೆಳ್ತಂಗಡಿ | ಪ್ರಾಪಚಿ, ಕೊಕ್ಕಡ |
| 24 | ದಾವಣಗೆರೆ | ದಾವಣಗೆರೆ | ಪ್ರಾಪಚಿ, ಅತ್ತಿಗೆರೆ |
| 25 | ದಾವಣಗೆರೆ | ಹರಹಪನಹಳ್ಳಿ | ಪ್ರಾಪಚಿ, ಉಚ್ಚಂಗಿದುರ್ಗ |
| 26 | ದಾವಣಗೆರೆ | ಹೊನ್ನಾಳಿ | ಕೃ.ಗ.ಕೇಂ, ಜೀನಹಳ್ಳಿ |
| 27 | ದಾವಣಗೆರೆ | ಜಗಳೂರು | ಕೃ.ಗ.ಕೆಂ, ಪಲ್ಲಾಗಟ್ಟೆ |
| 28 | ದಾವಣಗೆರೆ | ಚನ್ನಗಿರಿ | ಪ್ರಾಪಚಿ, ಚಿರಡೋಣಿ |
| 29 | ಧಾರವಾಡ | ಧಾರವಾಡ | ಕೃ.ಗ.ಉ.ಕೇಂ, ಗರಗ |
| 30 | ಧಾರವಾಡ | ಕಲಘಟಗಿ | ಕೃ.ಗ.ಕೇಂ, ಶಂಖದಹೊನ್ನಳ್ಳಿ |
| 31 | ಕಲಬುರಗಿ | ಆಳಂದ | ಪ್ರಾಪಚಿ, ಭೂಸನೂರ |
| 32 | ಕಲಬುರಗಿ | ಚಿಂಚೋಳಿ | ಪ್ರಾಪಚಿ, ನಾಗದಲಾಯಿ |
| 33 | ಕಲಬುರಗಿ | ಸೇಡಂ | ಪ್ರಾಪಚಿ, ಹುಡಗಿ |
| 34 | ಹಾಸನ | ಆಲೂರು | ಪ್ರಾಪಚಿ, ಪಾಳ್ಯ |
| 35 | ಹಾಸನ | ಹಾಸನ | ಪ್ರಾಪಚಿ, ಹೆರಗು |
| 36 | ಹಾಸನ | ಹೊಳೆನರಸೀಪುರ | ಪ್ರಾಪಚಿ, ಹಳೆಕೋಟೆ |
| 37 | ಹಾಸನ | ಸಕಲೇಶಪುರ | ಪ್ರಾಪಚಿ, ಉದೇವಾರ |
| 38 | ಹಾವೇರಿ | ಹಾವೇರಿ | ಕೃ.ಗ.ಉ.ಕೇಂ, ದೇವಗಿರಿ |
| 39 | ಹಾವೇರಿ | ಹಿರೇಕೆರೂರು | ಪ್ರಾಪಚಿ, ಹುಲ್ಲತ್ತಿ |
| 40 | ಹಾವೇರಿ | ಶಿಗಾಂವ್ | ಕೃ.ಗ.ಉ.ಕೇಂ, ಹಿರೆಬೆಂಡಿಗೇರಿ |
| 41 | ಹಾವೇರಿ | ರಾಣೆಬೆನ್ನೂರು | ಪ್ರಾಪಚಿ, ಅಸುಂಡಿ |
| 42 | ಕೋಲಾರ | ಮುಳಬಾಗಿಲು | ಪ್ರಾಪಚಿ, ಕೊಲದೇವಿ |
| 43 | ಕೋಲಾರ | ಕೋಲಾರ | ಪ್ರಾಪಚಿ, ಮದನಹಳ್ಳಿ |
| 44 | ಕೋಲಾರ | ಕೋಲಾರ | ಪ್ರಾಪಚಿ, ಬೆಗಲಿಹೊಸಳ್ಳಿ |
| 45 | ಮಂಡ್ಯ | ಪಾಂಡವಪುರ | ಪ್ರಾಪಚಿ, ನಾರಾಯಣಪುರ |
| 46 | ಮಂಡ್ಯ | ನಾಗಮಂಗಲ | ಪ್ರಾಪಚಿ, ಕಲಗೆರೆ |
| 47 | ಮೈಸೂರು | ಮೈಸೂರು | ಪ್ರಾಪಚಿ, ವರುಣಾ |
| 48 | ಮೈಸೂರು | ಹುಣಸೂರು | ಪ್ರಾಪಚಿ, ಕಣಕುಪ್ಪ/ ರತ್ನಾಪುರ |
| 49 | ಮೈಸೂರು | ಪಿರಿಯಾಪಟ್ಟಣ | ಪ್ರಾಪಚಿ, ಕಂಪಲಾಪುರ |
| 50 | ಮೈಸೂರು | ಮೈಸೂರು | ಪ್ರಾಪಚಿ, ಬೋಗಾದಿ |
| 51 | ಮೈಸೂರು | ನಂಜನಗೂಡು | ಪ್ರಾಪಚಿ, ನಗರ್ಲೆ |
| 52 | ರಾಯಚೂರು | ರಾಯಚೂರು | ಪ್ರಾಪಚಿ, ಚಂದ್ರಬಂಡ |
| 53 | ರಾಯಚೂರು | ಸಿಂಧನೂರು | ಪ್ರಾಪಚಿ, ಗುಡದೂರು |
| 54 | ರಾಮನಗರ | ಕನಕಪುರ | ಪ್ರಾಪಚಿ, ಹೆರಿಂದ್ಯಾಪನಹಳ್ಳಿ |

| | | | |
|---|---|---|---|
| 55 | ಶಿವಮೊಗ್ಗ | ಶಿಕಾರಿಪುರ | ಪ್ರಾಪಚಿ, ಮತ್ತಿಕೋಟೆ |
| 56 | ಶಿವಮೊಗ್ಗ | ಸಾಗರ | ಕೃ.ಗ.ಉ.ಕೇಂ, ಹೆಗ್ಗೋಡು |
| 57 | ಶಿವಮೊಗ್ಗ | ಹೊಸನಗರ | ಪ್ರಾಪಚಿ, ಅಲಗೇರಿಮಂಡ್ರಿ |
| 58 | ಶಿವಮೊಗ್ಗ | ಸಾಗರ | ಪ್ರಾಪಚಿ, ಕಾರ್ಗಲ್ |
| 59 | ತುಮಕೂರು | ಕೊರಟಗೆರೆ | ಪ್ರಾಪಚಿ, ಅಕ್ಕಿರಾಂಪುರ |
| 60 | ತುಮಕೂರು | ಕುಣಿಗಲ್ | ಕೃ.ಗ.ಕೇಂ, ನಿಡಸಾಲೆ |
| 61 | ತುಮಕೂರು | ತಿಪಟೂರು | ಪ್ರಾಪಚಿ, ಕುಪ್ಪಾಳು |
| 62 | ತುಮಕೂರು | ಪಾವಗಡ | ಪ್ರಾಪಚಿ, ಕೆ.ಟಿ.ಹಳ್ಳಿ |
| 63 | ತುಮಕೂರು | ಶಿರಾ | ಪ್ರಾಪಚಿ, ಲಕ್ಕನಹಳ್ಳಿ |
| 64 | ತುಮಕೂರು | ತುಮಕೂರು | ಪ್ರಾಪಚಿ, ಕೋರ |
| 65 | ತುಮಕೂರು | ಶಿರಾ | ಪ್ರಾಪಚಿ, ದ್ವಾರನಕುಂಟೆ |
| 66 | ತುಮಕೂರು | ಶಿರಾ | ಕೃ.ಗ.ಉ.ಕೇಂ, ಮೂಗನಹಳ್ಳಿ |
| 67 | ತುಮಕೂರು | ಗುಬ್ಬಿ | ಪ್ರಾಪಚಿ, ಬಿದರೆ |
| 68 | ಯಾದಗಿರಿ | ಶಹಾಪುರ | ಪ್ರಾಪಚಿ, ಹಯ್ಯಾಳ (ಬಿ) |
| 69 | ಕೊಪ್ಪಳ | ಗಂಗಾವತಿ | ಪ್ರಾಪಚಿ, ಬೂದಗುಂಪ |

**ಹೆಚ್.ಪ್ರಸನ್ನ,**
ಪೀಠಾಧಿಕಾರಿ –2,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ.
(ಪಶುಸಂಗೋಪನೆ–ಎ)

**P.R. 134**
**S.C. 100**

## ಆರ್ಥಿಕ ಸಚಿವಾಲಯ

### ಸೇರ್ಪಡೆ

### ಸಂ: ಆಇ 12 ಎಸ್‌ಆರ್‌ಪಿ 2012(IX) ಬೆಂಗಳೂರು, ದಿನಾಂಕ: 23–12–2014

ದಿನಾಂಕ: 14–6–2012ರ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 12 ಎಸ್‌ಆರ್‌ಪಿ 2012 (IX) ರ ಕ್ರಮ ಸಂಖ್ಯೆ 26ರ ಉಪ ಶೀರ್ಷಿಕೆ(2)(i)ರ **ಕರ್ನಾಟಕ ಸರ್ಕಾರದ ಸಚಿವಾಲಯದ–ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಐಆರ್‌ಎಲ್‌ಎ)** ಶೀರ್ಷಿಕೆಯಡಿಯಲ್ಲಿ ನಮೂದು (b) ನಂತರ ಈ ಕೆಳಗಿನ ನಮೂದನ್ನು (b)(i) ಎಂದು ಸೇರಿಸಿಕೊಳ್ಳತಕ್ಕದ್ದು.

| Sl.No. | Category of Post | Rate of Special Allowance (Rs.per month) |
|---|---|---|
| 26 | **Karnataka Government Secretariat**<br>**(2)(i) DPAR (IRLA)** | |
| | (b)(i) Special Officer - 1 Post | 250 |

ಈ ಆದೇಶವು ದಿನಾಂಕ: 23–10–2013 ರಿಂದ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್.ರಾಜಲಕ್ಷ್ಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ. (ಸೇವೆಗಳು–2)

**P.R. 135**
**S.C. 500**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ರಾಜ್ಯ ಸರ್ಕಾರಿ ನೌಕರರು ಮತ್ತು ಅವರ ಕುಟುಂಬದ ಅವಲಂಬಿತ ಸದಸ್ಯರಿಗೆ ನಗದುರಹಿತ ವೈದ್ಯಕೀಯ ಚಿಕಿತ್ಸೆಯನ್ನು ಒದಗಿಸಲು "ಜ್ಯೋತಿ ಸಂಜೀವಿನಿ" ಯೋಜನೆಯನ್ನು ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಮುಖಾಂತರ ಯೋಜನೆಯ ಕಾರ್ಯಾಚರಣೆಗೆ ಅನುಷ್ಠಾನ ಮಾರ್ಗಸೂಚಿ ರೂಪಿಸುವ ಕುರಿತು.

**ಓದಲಾಗಿದೆ:** 1. ಸಿ.ಆ.ಸು ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 14 ಎಸ್‌ಎಂಆರ್ 2013, ದಿನಾಂಕ: 18–08–2014.

2. ಕಾರ್ಯಕಾರಿ ನಿರ್ದೇಶಕರು, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್, ಬೆಂಗಳೂರು ಇವರ "**ಅನುಷ್ಠಾನ ಮಾರ್ಗಸೂಚಿ**" ಪ್ರಸ್ತಾವನಾ ಸಂಖ್ಯೆ: ಹೆಚ್‌ಎಫ್‌ಡಬ್ಲ್ಯೂ / ಎಸ್‌ಎಎಸ್‌ಟಿ/ 93/2013–14, ದಿನಾಂಕ: 19–11–2014.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ಸರ್ಕಾರಿ ಆದೇಶದಲ್ಲಿ ಮಾನ್ಯ ಮುಖ್ಯ ಮಂತ್ರಿಯವರು ದಿನಾಂಕ: 14-02-2014ರಂದು ಮಂಡಿಸಿದ 2014-15ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ ರಾಜ್ಯ ಸರ್ಕಾರಿ ನೌಕರರು ಮತ್ತು ಅವರ ಕುಟುಂಬದ ಅವಲಂಬಿತ ಸದಸ್ಯರಿಗೆ ನಗದುರಹಿತ ವೈದ್ಯಕೀಯ ಚಿಕಿತ್ಸೆಯನ್ನು ಒದಗಿಸಲು "ಜ್ಯೋತಿ ಸಂಜೀವಿನಿ" ಯೋಜನೆಯನ್ನು 2014-15ನೇ ಸಾಲಿನಿಂದ ಜಾರಿಗೊಳಿಸಲು ಮಂಜೂರಾತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ಪತ್ರದಲ್ಲಿ ಕಾರ್ಯಕಾರಿ ನಿರ್ದೇಶಕರು, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಅವರು ದಿನಾಂಕ: 18-11-2014ರಂದು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರು ನಡೆಸಿದ ಸಭೆಯ ತೀರ್ಮಾನದಂತೆ "ಜ್ಯೋತಿ ಸಂಜೀವಿನಿ" ಯೋಜನೆಯ ಕಾರ್ಯಾಚರಣೆಗೆ ಅನುಷ್ಠಾನ ಮಾರ್ಗಸೂಚಿಯ ಪ್ರಸ್ತಾವನೆಯನ್ನು ಸರ್ಕಾರದ ಅನುಮೋದನೆಗಾಗಿ ಸಲ್ಲಿಸಿರುತ್ತಾರೆ.

ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಅವರು ಸಲ್ಲಿಸಲಾದ "ಜ್ಯೋತಿ ಸಂಜೀವಿನಿ" ಯೋಜನೆಯ ಕಾರ್ಯಾಚರಣೆಯ ಅನುಷ್ಠಾನ ಮಾರ್ಗಸೂಚಿಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಅವುಗಳನ್ನು ಅನುಷ್ಠಾನಗೊಳಿಸಲು ನಿರ್ಧರಿಸಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 277 ಸಿಜಿಇ 2014, ಬೆಂಗಳೂರು, ದಿನಾಂಕ: 09ನೇ ಜನವರಿ, 2015**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ರಾಜ್ಯ ಸರ್ಕಾರಿ ನೌಕರರು ಮತ್ತು ಅವರ ಕುಟುಂಬದ ಅವಲಂಬಿತ ಸದಸ್ಯರಿಗೆ "ಜ್ಯೋತಿ ಸಂಜೀವಿನಿ" ಯೋಜನೆಯ ಕಾರ್ಯಾಚರಣೆಯನ್ನು ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಮುಖಾಂತರ ಜಾರಿಗೊಳಿಸತಕ್ಕದ್ದು. ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಅವರು ಅನುಬಂಧ-1ರಲ್ಲಿರುವ ಅನುಷ್ಠಾನ ಮಾರ್ಗಸೂಚಿ (Operational Guidelines)ಗಳನ್ವಯ ಈ ಯೋಜನೆಯ ಕಾರ್ಯಾಚರಣೆಯನ್ನು ದಿನಾಂಕ: 15-01-2015ರಿಂದ ಜಾರಿಗೊಳಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಟಿಪ್ಪಣಿ ಸಂಖ್ಯೆ: ಸಿಆಸುಇ 14 ಎಸ್ಎಂಆರ್ 2013, ದಿನಾಂಕ: 31-10-2014 ಹಾಗೂ 18-12-2014ರಲ್ಲಿ ನೀಡಲಾದ ಸಹಮತದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ.ರಾಮಚಂದ್ರ**

ಸರ್ಕಾರದ ಉಪ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಅನುಬಂಧ – I**

**ಕರ್ನಾಟಕ ರಾಜ್ಯದ ಸರ್ಕಾರಿ ನೌಕರರು ಮತ್ತು ಅವರ ಕುಟುಂಬದ ಅವಲಂಬಿತ ಸದಸ್ಯರಿಗೆ**

**"ಜ್ಯೋತಿ ಸಂಜೀವಿನಿ" ಯೋಜನೆ**

**ಯೋಜನೆ ಹಾಗೂ ಅದರ ಅನುಷ್ಠಾನ ಮಾರ್ಗಸೂಚಿಗಳು**

| | | |
|---|---|---|
| ಯೋಜನೆಯ ಹೆಸರು | : | "ಜ್ಯೋತಿ ಸಂಜೀವಿನಿ" |
| ಯೋಜನೆಯ ಫಲಾನುಭವಿಗಳು | : | ರಾಜ್ಯ ಸರ್ಕಾರಿ ನೌಕರರು ಮತ್ತು ಅವರ ಕುಟುಂಬದ ಅವಲಂಬಿತ ಸದಸ್ಯರು |
| ಯೋಜನೆಯ ಉದ್ದೇಶ | : | ಗಂಭೀರ ಹಾಗೂ ಮಾರಣಾಂತಿಕ ಖಾಯಿಲೆಗಳಿಗೆ ತುತ್ತಾದ ರಾಜ್ಯ ಸರ್ಕಾರಿ ನೌಕರರು ಮತ್ತು ಅವರ ಕುಟುಂಬದ ಅವಲಂಬಿತ ಸದಸ್ಯರಿಗೆ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಗಳಲ್ಲಿ ತೃತೀಯ ಹಂತದ **(Tertiary Health Care)** ಚಿಕಿತ್ಸೆಗಾಗಿ ಶಸ್ತ್ರ ಚಿಕಿತ್ಸೆ, ಥೆರಫಿಗಳು ಮತ್ತು ವೈದ್ಯಕೀಯ ಚಿಕಿತ್ಸೆಗಳನ್ನು ಒಳಗೊಂಡಂತೆ ಉತ್ತಮ ಗುಣಮಟ್ಟದ ವೈದ್ಯಕೀಯ ನೆರವನ್ನು ಒದಗಿಸುವುದು ಸರ್ಕಾರದ ಉದ್ದೇಶವಾಗಿರುತ್ತದೆ. |
| ಅನುಷ್ಠಾನಗೊಳಿಸುವ ಸಂಸ್ಥೆ | : | **ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್,**<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,<br>ಕರ್ನಾಟಕ ಸರ್ಕಾರ, ಬೆಂಗಳೂರು |
| ಅನುದಾನದ ನೆರವು | : | ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, ಕರ್ನಾಟಕ ಸರ್ಕಾರ, ಚಿಕಿತ್ಸೆಯ ಸಂಪೂರ್ಣ ವೆಚ್ಚವನ್ನು ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್, ಮೂಲಕ ಭರಿಸತಕ್ಕದ್ದು. |

**ಯೋಜನೆಯ ಅನುಷ್ಠಾನದ ಮಾರ್ಗಸೂಚಿಗಳು**

1. **ಫಲಾನುಭವಿಗಳು ಮತ್ತು ಯೋಜನೆಯ ವ್ಯಾಪ್ತಿ :**

"**ಫಲಾನುಭವಿ**" ಎಂದರೆ ರಾಜ್ಯ ಸರ್ಕಾರದ ಎಲ್ಲಾ ಸರ್ಕಾರಿ ನೌಕರರು ಮತ್ತು ಸರ್ಕಾರದ ಸೇವಾ ನಿಯಮಾವಳಿಗಳ ಅಡಿಯಲ್ಲಿ ಬರುವ ಅವರ ಕುಟುಂಬದ ಅವಲಂಬಿತ ಸದಸ್ಯರು ಈ ಯೋಜನೆಯ ವ್ಯಾಪ್ತಿಗೆ ಒಳಪಡುತ್ತಾರೆ. ಕರ್ನಾಟಕ ರಾಜ್ಯ ಸರ್ಕಾರಿ ನೌಕರರ **(Medical Attendant)** ನಿಯಮಾವಳಿ-1963ರ ನಿಯಮ 2(1)ರ ಖಂಡ **(i) (ii)** ಮತ್ತು **(iii)** ರನ್ವಯ ಸರ್ಕಾರಿ ನೌಕರರ ಕುಟುಂಬದ ಅವಲಂಭಿತ ಸದಸ್ಯರನ್ನು ಈ ಕೆಳಕಂಡಂತೆ ವ್ಯಾಖ್ಯಾನಿಸಲಾಗಿರುತ್ತದೆ.

(1) ಸರ್ಕಾರಿ ನೌಕರನ ಪತ್ನಿ ಅಥವಾ ಪತಿ.

(2) ಸರ್ಕಾರಿ ನೌಕರರ ತಂದೆ ಮತ್ತು ತಾಯಿ (ಮಲತಾಯಿ ಒಳಗೊಂಡಂತೆ)

ಇವರು ಸರ್ಕಾರಿ ನೌಕರನ ಜೊತೆಯಲ್ಲಿ ಸಾಮಾನ್ಯವಾಗಿ ವಾಸವಿರತಕ್ಕದ್ದು ಮತ್ತು ಇವರ ಮಾಸಿಕ ಆದಾಯ ಒಟ್ಟು ರೂ.6,000/– ಗಳನ್ನು ಮೀರತಕ್ಕದ್ದಲ್ಲ.

(3) ಸರ್ಕಾರಿ ನೌಕರನ ಮೇಲೆ ಸಂಪೂರ್ಣವಾಗಿ ಅವಲಂಭಿಸಿರುವ ಮಕ್ಕಳು (ದತ್ತು ಮಕ್ಕಳು ಮತ್ತು ಮಲ ಮಕ್ಕಳು ಒಳಗೊಂಡಂತೆ)

ಸರ್ಕಾರಿ ನೌಕರನು ತನ್ನ ಕುಟುಂಬದ ಅವಲಂಬನೆಯ ಕುರಿತು ಪ್ರಮಾಣಿತ ಘೋಷಣೆಯನ್ನು ಸಲ್ಲಿಸತಕ್ಕದ್ದು.

2. **ಯೋಜನೆಯ ವಿನ್ಯಾಸ :–**

ಈ ಯೋಜನೆಯನ್ನು ರಾಜ್ಯದ ಎಲ್ಲಾ ಸರ್ಕಾರಿ ನೌಕರರಿಗೆ ಮತ್ತು ಅವಲಂಭಿತ ಕುಟುಂಬದ ಸದಸ್ಯರಿಗೆ ನೋಂದಾಯಿತ ನೆಟ್‌ವರ್ಕ್ ಆಸ್ಪತ್ರೆಗಳ ಮೂಲಕ, ವೈದ್ಯಕೀಯ ಆರ್ಥಿಕ ನೆರವಿಗೆ ಯಾವುದೇ ಗರಿಷ್ಠ ಮಿತಿಯಿಲ್ಲದಂತೆ, **ಆರೋಗ್ಯ ಭರವಸೆಯ** ವಿಧಾನದಲ್ಲಿ ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಸಂಸ್ಥೆಯು ಅನುಷ್ಠಾನಗೊಳಿಸತಕ್ಕದ್ದು. ಈ ಕೆಳಕಾಣಿಸಿದ ಸಂದರ್ಭಗಳನ್ನು ಹೊರತುಪಡಿಸಿ ಫಲಾನುಭವಿಗಳಿಗೆ ಒದಗಿಸುವ ವೈದ್ಯಕೀಯ ನೆರವು ಸಂಪೂರ್ಣವಾಗಿ **ನಗದುರಹಿತ** ವಾಗಿರತಕ್ಕದ್ದು.

(1) ಯೋಜನೆಯಲ್ಲಿ ನಿಗಧಿಪಡಿಸಿರುವ ಬೆನಿಫಿಟ್ ಪ್ಯಾಕೇಜ್‌ನ ದರಗಳಿಗಿಂತ ಹೆಚ್ಚು ದರದ ಸ್ಟೆಂಟ್ ಪ್ರೋಸ್ತೆಸಿಸ್ ಮತ್ತು ಇಂಪ್ಲಾಂಟ್ಸ್‌ಗಳ ಅಳವಡಿಕೆಯನ್ನು ಫಲಾನುಭವಿಯು ಬಯಸಿದ್ದಲ್ಲಿ/ ಆಯ್ಕೆ ಮಾಡಿಕೊಂಡಲ್ಲಿ.

(2) ಯೋಜನೆಯಲ್ಲಿ ನಿಗಧಿ ಪಡಿಸಿದ ವಾರ್ಡ್ ಸೌಲಭ್ಯಕ್ಕಿಂತ ಉನ್ನತ ದರ್ಜೆಯ ವಾರ್ಡ್ ಸೌಲಭ್ಯಗಳನ್ನು ಫಲಾನುಭವಿಯು ಆಯ್ಕೆ ಮಾಡಿಕೊಂಡಲ್ಲಿ,

ಮೇಲ್ಕಂಡ ಸೌಲಭ್ಯಗಳನ್ನು ಪಡೆದಲ್ಲಿ, ಇದರ ವ್ಯತ್ಯಾಸದ ಮೊತ್ತವನ್ನು ಫಲಾನುಭವಿಯೇ ಭರಿಸತಕ್ಕದ್ದು.

3. **ವೈದ್ಯಕೀಯ ಸೌಲಭ್ಯದ ಪ್ಯಾಕೇಜ್:–**

ಈ ಯೋಜನೆಯ ಅಡಿಯಲ್ಲಿ, ಏಳು ತರಹದ ಗಂಭೀರ ಹಾಗೂ ಮಾರಣಾಂತಿಕ ಖಾಯಿಲೆಗಳಾದ **ಹೃದ್ರೋಗ** (ಕಾರ್ಡಿಯೋ ಥೊರಾಸಿಕ್/ಕಾರ್ಡಿಯೋವ್ಯಾಸ್ಕುಲರ್ ಶಸ್ತ್ರಚಿಕಿತ್ಸೆ ಮತ್ತು ಹೃದಯ ಶಸ್ತ್ರಚಿಕಿತ್ಸಾ ವಿಧಾನವು ಒಳಗೊಂಡಂತೆ), **ನರರೋಗ** (ಕ್ರೇನಿಯಲ್, ಸ್ಪೈನಲ್ ಮತ್ತು ಪೆರಿಫೆರಲ್ ನರಶಸ್ತ್ರಚಿಕಿತ್ಸೆ ವಿಧಾನಗಳು ಒಳಗೊಂಡಂತೆ), **ಕ್ಯಾನ್ಸರ್** (ವೈದ್ಯಕೀಯ ಚಿಕಿತ್ಸೆ, ಶಸ್ತ್ರಚಿಕಿತ್ಸೆ ಮತ್ತು ರೇಡಿಯೇಶನ್ ಒಳಗೊಂಡಂತೆ), **ಶಿಶುಗಳ ಶಸ್ತ್ರಚಿಕಿತ್ಸೆ** (ನವಜಾತ ಶಿಶುಗಳಿಗೆ ಸಂಬಂಧಿಸಿದಂತೆ), **ಅಪಘಾತ** (ಬಹು ಅಂಗಗಳು ಒಳಗೊಂಡಂತಹ ಗಾಯ), **ಜೆನಿಟೋ ಯೂರಿನರಿ ಶಸ್ತ್ರಚಿಕಿತ್ಸೆಗಳು** (ಮೂತ್ರಪಿಂಡ ಮತ್ತು ಕಾಂಜಿನೈಟಲ್ ಜೆನಿಟಲ್ ಕಾಯಿಲೆಗಳು ಒಳಗೊಂಡಂತೆ) ಮತ್ತು **ಸುಟ್ಟಗಾಯ** (ವಿದ್ಯುತ್ ಅಪಘಾತ ಒಳಗೊಂಡಂತೆ) ಇವುಗಳಿಗೆ ವೈದ್ಯಕೀಯ ಚಿಕಿತ್ಸೆಯನ್ನು ಒದಗಿಸಲಾಗುವುದು.

ಮೇಲೆ ಕಾಣಿಸಿರುವ ಏಳು ಕಾಯಿಲೆಗಳ ಚಿಕಿತ್ಸೆಗಳಿಗಾಗಿ ಒಟ್ಟು 449 ಚಿಕಿತ್ಸಾ/ ಶಸ್ತ್ರಚಿಕಿತ್ಸಾ ವಿಧಾನಗಳನ್ನು ಅಳವಡಿಸಿಕೊಳ್ಳಲಾಗಿದೆ. ಇದಲ್ಲದೆ, ಫಲಾನುಭವಿಯು ಆಸ್ಪತ್ರೆಯಿಂದ ಬಿಡುಗಡೆಯಾದ ನಂತರ ನಿಗಧಿತ ಖಾಯಿಲೆಗಳಿಗೆ ಸಂಬಂಧಿಸಿದಂತೆ 50 ಅನುಸರಣಾ ಚಿಕಿತ್ಸಾ ಸೌಲಭ್ಯಗಳು **(50 defined follow-up packages)** ಸಹ (ವೈದ್ಯಕೀಯ ಸಮಾಲೋಚನೆ, ಡಯಾಗ್ನೊಸ್ಟಿಕ್ಸ್ ಮತ್ತು ಔಷಧೋಪಚಾರ ಒಳಗೊಂಡಂತೆ) ಈ ಯೋಜನೆಯಡಿಯಲ್ಲಿ ಲಭ್ಯವಿರುತ್ತದೆ. ವಿವರಗಳು ಈ ಕೆಳಕಂಡಂತಿರುತ್ತದೆ.

| ಕ್ರ. ಸಂ. | ಕಾಯಿಲೆಯ ವಿವರ | ಚಿಕಿತ್ಸಾ ವಿಧಾನಗಳ ಸಂಖ್ಯೆ | ಅನುಸರಣಾ ಚಿಕಿತ್ಸಾ ವಿಧಾನಗಳ ಸಂಖ್ಯೆ |
|---|---|---|---|
| 1 | **ಹೃದ್ರೋಗ**<br>(ಕಾರ್ಡಿಯೋ ಥೊರಾಸಿಕ್/ಕಾರ್ಡಿಯೋವ್ಯಾಸ್ಕುಲರ್ ಶಸ್ತ್ರಚಿಕಿತ್ಸೆ ಮತ್ತು ಹೃದಯ ಶಸ್ತ್ರಚಿಕಿತ್ಸಾ ವಿಧಾನವು ಒಳಗೊಂಡಂತೆ) | 145 | 23 |
| 2 | **ಕ್ಯಾನ್ಸರ್**<br>(ವೈದ್ಯಕೀಯ ಚಿಕಿತ್ಸೆ, ಶಸ್ತ್ರಚಿಕಿತ್ಸೆ ಮತ್ತು ರೇಡಿಯೇಶನ್ ಒಳಗೊಂಡಂತೆ), | 189 | 1 |
| 3 | **ನರರೋಗ**<br>(ಕ್ರೇನಿಯಲ್, ಸ್ಪೈನಲ್ ಮತ್ತು ಪೆರಿಫೆರಲ್ ನರಶಸ್ತ್ರಚಿಕಿತ್ಸೆ ವಿಧಾನಗಳು ಒಳಗೊಂಡಂತೆ) | 50 | 18 |
| 4 | **ಜೆನಿಟೋ ಯೂರಿನರಿ ಶಸ್ತ್ರಚಿಕಿತ್ಸೆಗಳು**<br>(ಮೂತ್ರಪಿಂಡ ಮತ್ತು ಕಾಂಜಿನೈಟಲ್ ಜೆನಿಟಲ್ ಕಾಯಿಲೆಗಳು ಒಳಗೊಂಡಂತೆ) | 21 | 8 |
| 5 | **ಸುಟ್ಟಗಾಯ**<br>(ವಿದ್ಯುತ್ ಅಪಘಾತ ಒಳಗೊಂಡಂತೆ) | 11 | |
| 6 | **ಅಪಘಾತ**<br>(ಬಹು ಅಂಗಗಳು ಒಳಗೊಂಡಂತಹ ಗಾಯ) | 8 | |
| 7 | **ಶಿಶುಗಳ ಶಸ್ತ್ರಚಿಕಿತ್ಸೆ**<br>(ನವಜಾತ ಶಿಶುಗಳಿಗೆ ಸಂಬಂಧಿಸಿದಂತೆ) | 25 | |
| | **ಒಟ್ಟು ಚಿಕಿತ್ಸಾ ವಿಧಾನಗಳು** | **449** | **50** |

**4. ಅನರ್ಹತೆ :**

ಸರ್ಕಾರೀ ಪ್ರಯೋಜತ್ವದ ಯಾವುದೇ ಇತರೆ ಆರೋಗ್ಯ ಯೋಜನೆಗಳಲ್ಲಿ ಮೇಲೆ ಉಲ್ಲೇಖಿಸಿರುವ ಏಳು ತರಹದ ಕಾಯಿಲೆಗಳಿಗೆ ನಿಗಧಿಪಡಿಸಿರುವ 449 ಚಿಕಿತ್ಸಾ ವಿಧಾನಗಳಲ್ಲಿ ಈ ಹಿಂದೆಯೇ ವೈದ್ಯಕೀಯ ಸೌಲಭ್ಯವನ್ನು ಪಡೆದಿದ್ದಲ್ಲಿ, ಅಂತಹ ಸರ್ಕಾರಿ ನೌಕರರು ಈ ಯೋಜನೆಯ ಸೌಲಭ್ಯವನ್ನು ಪಡೆಯಲು ಅರ್ಹರಾಗಿರುವುದಿಲ್ಲ.

**5. ಆಸ್ಪತ್ರೆಗಳ ಸಂಪರ್ಕ ಜಾಲ :–**

ಫಲಾನುಭವಿಗಳಿಗೆ ಉತ್ತಮ ಗುಣಮಟ್ಟದ ವೈದ್ಯಕೀಯ ಚಿಕಿತ್ಸೆಯನ್ನು ನೋಂದಾಯಿತ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಗಳ ಮೂಲಕ ಒದಗಿಸತಕ್ಕದ್ದು. ಅರ್ಹ ಆಸ್ಪತ್ರೆಗಳ ಗುರುತಿಸುವಿಕೆ ಮತ್ತು ನೋಂದಣಿ ಪ್ರಕ್ರಿಯೆಯು ಸಂದರ್ಭಕ್ಕನುಗುಣವಾಗಿ ನಿರಂತರವಾದ ಪ್ರಕ್ರಿಯೆಯಾಗಿರತಕ್ಕದ್ದು. ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್‌ನಿಂದ ಆಸ್ಪತ್ರೆಗಳ ನೋಂದಣಿ ಪ್ರಕ್ರಿಯೆಗೆ ನಿಗಧಿ ಪಡಿಸಿರುವ ಮಾನದಂಡಗಳನ್ನು ಪೂರೈಸಿದಲ್ಲಿ, ಅಂತಹ ಆಸ್ಪತ್ರೆಗಳನ್ನು ನೋಂದಣಿ ಮಾಡಿಕೊಳ್ಳಲಾಗುವುದು ಮತ್ತು ವಾಜಪೇಯಿ ಆರೋಗ್ಯಶ್ರೀ ಯೋಜನೆಯಡಿಯಲ್ಲಿ ಪ್ರಸ್ತುತವಾಗಿ ನೋಂದಣಿಯಾಗಿರುವ ನೆಟ್‌ವರ್ಕ್ ಆಸ್ಪತ್ರೆಗಳು ಜ್ಯೋತಿ ಸಂಜೀವಿನಿ ಯೋಜನೆಯಡಿಯಲ್ಲಿ ನೋಂದಣಿಯಾಗಲು ಅರ್ಹವಾಗಿರುತ್ತವೆ.

**6. ವೇತನ ಶ್ರೇಣಿಗನುಗುಣವಾಗಿ ಸರ್ಕಾರಿ ನೌಕರರು ಈ ಕೆಳಕಂಡ ವಾರ್ಡ್‌ಗಳಲ್ಲಿ ಚಿಕಿತ್ಸೆ ಪಡೆಯಲು ಅರ್ಹರಾಗಿರುತ್ತಾರೆ :**

| ಕ್ರ ಸಂ. | ವೇತನ ಶ್ರೇಣಿ | ಪಡೆಯಲರ್ಹವಾದ ವಾರ್ಡ್‌ಗಳ ದರ್ಜೆ/ ಸೌಲಭ್ಯಗಳು |
|---|---|---|
| 1 | ಮಾಸಿಕವಾಗಿ ರೂ. 16,000/– ರವರೆಗೆ | ಸಾಮಾನ್ಯ ವಾರ್ಡ್ |
| 2 | ಮಾಸಿಕವಾಗಿ ರೂ. 16,000/– ದಿಂದ 43,200/– ವರೆಗೆ | ಅರೆ–ಖಾಸಗೀ ವಾರ್ಡ್ |
| 3 | ರೂ. 43,201/ ಮತ್ತು ಮೇಲ್ಪಟ್ಟು | ಖಾಸಗೀ ವಾರ್ಡ್ |

**7. ವಾರ್ಡ್ ದರಗಳು ಮತ್ತು ಬಿಲ್ ಮಾಡುವ ವಿಧಾನ :**

ಸಾಮಾನ್ಯ, ಅರೆ–ಖಾಸಗೀ ಮತ್ತು ಖಾಸಗೀ ವಾರ್ಡ್ ದರಗಳನ್ನು ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಸಂಸ್ಥೆಯು ನಿಗಧಿಗೊಳಿಸತಕ್ಕದ್ದು.

ಬಿಲ್ಲುಗಳನ್ನು ಮೇಲೆ ನಿಗಧಿಪಡಿಸಿರುವ ದರಗಳನ್ವಯ ತಯಾರಿಸಿ ಸಲ್ಲಿಸುವುದು.

**8. ಫಲಾನುಭವಿ ಸರ್ಕಾರಿ ನೌಕರನ ಗುರುತಿನ ಮಾನದಂಡ:**

ರಾಜ್ಯ ಸರ್ಕಾರದ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಹೆಚ್‌ಆರ್‌ಎಂಎಸ್ ಡಾಟಾ ಬೇಸ್‌ನೊಂದಿಗೆ ಸಮನ್ವಯಿತಗೊಂಡಿರುವ ಸರ್ಕಾರಿ ನೌಕರನ ಕೆಜಿಐಡಿ ಪಾಲಿಸಿ ಸಂಖ್ಯೆಯು ಅಂತಹ ಸರ್ಕಾರಿ ನೌಕರನ ಗುರುತಿನ ಮಾನದಂಡವಾಗಿರುತ್ತದೆ. ಸರ್ಕಾರಿ ನೌಕರರ ಮತ್ತು ಅವರ ಅವಲಂಭಿತರ ಕುಟುಂಬ ಸದಸ್ಯರನ್ನು ಡಾಟಾ ಬೇಸ್ ಮೂಲಕ ಗುರುತಿಸಲು ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಸಂಸ್ಥೆಗೆ ಸರ್ಕಾರವು ಅವಕಾಶ ನೀಡತಕ್ಕದ್ದು.

ಆಗತಾನೆ ಜನಿಸಿದ ಮಗು ಅಥವಾ ಒಂದು ವರ್ಷದೊಳಗಿರುವ ಮಗುವು ಫಲಾನುಭವಿಯಾದ ಸಂದರ್ಭದಲ್ಲಿ ಅಂತಹ ಮಗುವಿನ ಗುರುತನ್ನು ಸರ್ಕಾರಿ ನೌಕರನೆ ದೃಢೀಕರಿಸಬಹುದಾಗಿರುತ್ತದೆ.

**9. ಅನುಷ್ಠಾನ ನೆರವು ಸಂಸ್ಥೆಯ ಜೊತೆ ಒಪ್ಪಂದ (ISA)**

ಈ ಯೋಜನೆಯ ಅನುಷ್ಠಾನಕ್ಕಾಗಿ ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಸಂಸ್ಥೆಯು ಅನುಷ್ಠಾನ ನೆರವು ಸಂಸ್ಥೆಯೊಂದರ ಸೇವೆಯನ್ನು ಪಡೆದುಕೊಳ್ಳತಕ್ಕದ್ದು. ಯೋಜನೆಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಮಾಹಿತಿ, ಶಿಕ್ಷಣ ಮತ್ತು ಸಂವಹನ ಚಟುವಟಿಕೆಗಳ ನಿರ್ವಹಣೆ, ಅರ್ಹ ಆಸ್ಪತ್ರೆಗಳ ನೋಂದಣಿ, ಹಣ ಪಾವತಿ ವ್ಯವಸ್ಥೆಯನ್ನು ರೂಪಿಸುವುದು, ಆರೋಗ್ಯ ಮಿತ್ರರನ್ನು ನೇಮಕಾತಿ ಮಾಡಿ ಸೂಕ್ತ ತರಬೇತಿ ನಂತರ ನೋಂದಾಯಿತ ಆಸ್ಪತ್ರೆಗಳಿಗೆ ನೇಮಿಸುವುದು, ಆರೋಗ್ಯ ಶಿಬಿರಗಳನ್ನು ಏರ್ಪಡಿಸುವುದು, ಸಹಾಯವಾಣಿ/ಕುಂದು ಕೊರತೆ ಕೇಂದ್ರಗಳ ಸ್ಥಾಪನೆ ಮಾಡುವುದು, ಫ್ರೀ ಆಥರೈಸೇಷನ್ ಮತ್ತು ಕ್ಲೈಂ ನಿರ್ವಹಣಾ ವ್ಯವಸ್ಥೆ ಮಾಡುವುದು, ಆರೋಗ್ಯ ಸೇವೆ ಒದಗಿಸುವ ಸಂಸ್ಥೆಗಳ ಉಸ್ತುವಾರಿ ಮತ್ತು ಮೌಲ್ಯಮಾಪನ ಇತ್ಯಾದಿ ಚಟುವಟಿಕೆಗಳನ್ನು ಸಮರ್ಪಕವಾಗಿ ಜಾರಿಗೊಳಿಸುವುದು ಅನುಷ್ಠಾನ ನೆರವು ಸಂಸ್ಥೆಯ ಜವಾಬ್ದಾರಿಯಾಗಿರುತ್ತದೆ.

**10. ತಂತ್ರಾಂಶ:**

ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಸಂಸ್ಥೆಯು ಈ ಯೋಜನೆಯ ಸಮಗ್ರ ಹಾಗೂ ಸಂಪೂರ್ಣ ಅನುಷ್ಠಾನದ ಉದ್ದೇಶಕ್ಕಾಗಿ ತಂತ್ರಾಂಶ ಸೌಲಭ್ಯವನ್ನು ಇ–ವ್ಯವಸ್ಥೆಯ ಆಧಾರದ ಮೇಲೆ ಅಭಿವೃದ್ಧಿಪಡಿಸತಕ್ಕದ್ದು.

**11. ಫ್ರೀ ಆಥರೈಸೇಷನ್ ಮತ್ತು ಕ್ಲೈಂ ಅಂಗೀಕಾರ ಪ್ರಕ್ರಿಯೆ :–**

1. ಪ್ರತೀ ನೆಟ್‌ವರ್ಕ್ ಆಸ್ಪತ್ರೆಯಲ್ಲಿ ಆರೋಗ್ಯಮಿತ್ರರು ಇರತಕ್ಕದ್ದು.
2. ಫಲಾನುಭವಿಯು ಚಿಕಿತ್ಸಾ ಪೂರ್ವ ಪರೀಕ್ಷೆಗಳಿಗೆ ಮತ್ತು ಆಸ್ಪತ್ರೆ ದಾಖಲಾತಿಗೆ ಸಹಾಯವನ್ನು ಒದಗಿಸತಕ್ಕದ್ದು.
3. ಫಲಾನುಭವಿಯು ಆಸ್ಪತ್ರೆಗೆ ದಾಖಲಾದ ನಂತರ ತಕ್ಷಣವೇ ಫ್ರೀ–ಆಥ್ ಮಂಜೂರಾತಿಗೆ ಕ್ರಮವಹಿಸತಕ್ಕದ್ದು.
4. ಫ್ರೀ–ಆಥ್ ಮಂಜೂರಾತಿ ನಂತರದಲ್ಲಿ ಫಲಾನುಭವಿಗೆ ಚಿಕಿತ್ಸೆ ನಡೆಸುವ ಸಂದರ್ಭದಲ್ಲಿ ಫ್ರೀ–ಆಥ್ ಮಂಜೂರಾತಿ ಪಡೆದಿರುವ ಚಿಕಿತ್ಸೆಯನ್ನು ಹೊರತು ಪಡಿಸಿ, ಗುರುತಿಸಲಾಗಿಲ್ಲದ ಬೇರೊಂದು ಚಿಕಿತ್ಸಾ ವಿಧಾನ/ವಿಧಾನಗಳನ್ನು ಗುರುತಿಸಿದಲ್ಲಿ, ಫಲಾನುಭವಿಯ ಹಿತದೃಷ್ಟಿಯಿಂದ ಚಿಕಿತ್ಸೆಯನ್ನು ನೀಡಬಹುದಾಗಿದ್ದು, ನಂತರದಲ್ಲಿ ನೆಟ್‌ವರ್ಕ್ ಆಸ್ಪತ್ರೆಗಳು ಕ್ಲೈಂ ಸಲ್ಲಿಸುವಾಗ ಸೂಕ್ತ ದಾಖಲೆಗಳೊಂದಿಗೆ ಸಲ್ಲಿಸತಕ್ಕದ್ದು, ನಂತರ ಎಸ್‌ಎಎಸ್‌ಟಿ ನುರಿತ ತಜ್ಞರಿಂದ ಸದರಿ ಕ್ಲೈಂ ಅನ್ನು ಪರಿಶೀಲಿಸಿ ಇತ್ಯರ್ಥಗೊಳಿಸುವುದು.
5. ಫಲಾನುಭವಿಯು ನಿಗಧಿತ ಅವಧಿಯೊಳಗೆ ಅವಶ್ಯಕ ಚಿಕಿತ್ಸೆಯನ್ನು ಪಡೆದು ಆಸ್ಪತ್ರೆಯಿಂದ ಬಿಡುಗಡೆ ಹೊಂದಲು ಕ್ರಮವಹಿಸತಕ್ಕದ್ದು.

6. ನಿಗಧಿತ ಅವಧಿಯಲ್ಲಿ ಕ್ಲೈಂ ಪ್ರಕರಣಗಳನ್ನು ಫಲಾನುಭವಿಯು ಆಸ್ಪತ್ರೆಯಿಂದ ಬಿಡುಗಡೆಯಾದ ನಂತರ ಮಂಜೂರಾತಿಗಾಗಿ ಸಲ್ಲಿಸಲು ಸಂಬಂಧಪಟ್ಟ ಆಸ್ಪತ್ರೆಯು ಸೂಕ್ತ ಕ್ರಮವನ್ನು ಕೈಗೊಳ್ಳತಕ್ಕದ್ದು.
7. ಸಲ್ಲಿಸಲ್ಪಟ್ಟ ಕ್ಲೈಂಗಳನ್ನು ನಿಯಮಾನುಸಾರ ಪರಿಶೀಲಿಸಿ ನಿಗಧಿತ ಅವಧಿಯೊಳಗೆ ಮಂಜೂರಾತಿ ಮಾಡಿ RTGS ಮೂಲಕ ನೋಂದಾಯಿತ ನೆಟ್‌ವರ್ಕ್ ಆಸ್ಪತ್ರೆಗಳಿಗೆ ಪಾವತಿಮಾಡತಕ್ಕದ್ದು.

**12. ಸಹಾಯ ವಾಣಿ/ ಕುಂದು ಕೊರತೆಗಳ ಕೋಶ:**

ಈ ಯೋಜನೆಯಡಿ ದೂರುಗಳಿಗೆ ತಕ್ಷಣವೇ ಸ್ಪಂದಿಸಲು ಸಹಾಯವಾಣಿ/ಕುಂದು ಕೊರತೆಗಳ ಕೋಶವನ್ನು ಅನುಷ್ಠಾನ ನೆರವು ಸಂಸ್ಥೆ (ISA) ಯಲ್ಲಿ ಸ್ಥಾಪಿಸಿದ್ದು, ಇದನ್ನು ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ವತಿಯಿಂದ ಪರಿಶೀಲನೆ ನಡೆಸಲಾಗುವುದು

**13. ಅಂತರ್ಜಾಲ (Website) :**

ಈ ಯೋಜನೆಗೆ ಪ್ರತ್ಯೇಕ ಅಂತರ್ಜಾಲ ವ್ಯವಸ್ಥೆಯನ್ನು ವಿನ್ಯಾಸಗೊಳಿಸಿ, ಇದರಲ್ಲಿ ಸೂಕ್ತ ಮಾಹಿತಿಯನ್ನು ಕಾಲಾನುಕಾಲಕ್ಕೆ ಸಾರ್ವಜನಿಕರ ಅನುಕೂಲಕ್ಕಾಗಿ ಒದಗಿಸಲಾಗುವುದು.

**14. ಲೆಕ್ಕ ನಿರ್ವಹಣೆ ಮತ್ತು ಲೆಕ್ಕ ಪರಿಶೋಧನೆ:–**

1. ಈ ಯೋಜನೆಯ ನಿರ್ವಹಣೆಗಾಗಿ ಪ್ರತ್ಯೇಕ ಬ್ಯಾಂಕ್ ಖಾತೆಯನ್ನು ನಿರ್ವಹಿಸತಕ್ಕದ್ದು.
2. ಈ ಯೋಜನೆಯ ಅನುದಾನದ ಹಣಕಾಸು ವ್ಯವಹಾರವನ್ನು ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಸಂಸ್ಥೆಯ ಕಾರ್ಯಕಾರಿ ನಿರ್ದೇಶಕರು ಹಾಗೂ ನಿರ್ದೇಶಕರು (ಹಣಕಾಸು) ರವರ ಜಂಟಿ ಸಹಿಯಲ್ಲಿ ನಿರ್ವಹಿಸತಕ್ಕದ್ದು.
3. ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಸಂಸ್ಥೆಯು ಸ್ಟಾಚುಟರಿ ಲೆಕ್ಕಪರಿಶೋಧಕರನ್ನು ಹಾಗೂ ಆಂತರಿಕ ಲೆಕ್ಕಪರಿಶೋಧಕರನ್ನು ನೇಮಕ ಮಾಡಿಕೊಳ್ಳತಕ್ಕದ್ದು.
4. ಯೋಜನೆಯ ಲೆಕ್ಕ ನಿರ್ವಹಣಾ ವರದಿಯನ್ನು ಲೆಕ್ಕ ಪರಿಶೋಧನೆಯ ನಂತರ ತ್ರೈಮಾಸಿಕವಾಗಿ ಹಾಗೂ ವಾರ್ಷಿಕವಾಗಿ ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್‌ಗೆ ಲೆಕ್ಕ ಪರಿಶೋಧಕರು ಸಲ್ಲಿಸತಕ್ಕದ್ದು.

**ಟಿ.ಕೆ.ರಾಮಚಂದ್ರ**

ಸರ್ಕಾರದ ಉಪ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ANNEXURE-I**

**"Jyothi Sanjeevini" Scheme for State Government Employees**

**and**

**their dependants in Karnataka**

**The Scheme and its Operational Guidelines**

| | |
|---|---|
| **Nomenclature of the Scheme:** | **"Jyothi Sanjeevini Scheme" .** |
| **Beneficiaries of the Scheme:** | **"State Government Employees and their dependants"** |
| **Object of the Scheme:** | To provide quality **"tertiary health care"** for the treatment of catastrophic illnesses involving hospitalization, surgery, and other therapies through an identified Network of Super Speciality Hospitals. |
| **Implementing Authority** | **"Suvarna Arogya Suraksha Trust"**<br>Department of Health & Family Welfare.<br>Government of Karnataka, Bengaluru. |
| **Funding** | The entire cost of treatment shall be borne by the Department of Personnel and Administrative Reforms, Government of Karnataka; through Suvarna Arogya Suraksha Trust. |

**Operational Guidelines:**

**1 Beneficiaries & Coverage:**

**"Beneficiary"** means and relates to all State Government Employees and their dependant family members defined by the Government of Karnataka from time to time; and as such all of them are covered under this Scheme.

The dependant family members of a Government Servant includes as defined under clause (i) (ii) & (iii) of Rule 2(1) of Karnataka Government Servants (Medical Attendant) Rules, 1963 which defines as under:

(1) The wife or husband of the Government Servant.

(2) The father and mother (including step-mother) if they ordinarily reside with the Government Servant and their total monthly income does not exceed Rs. 6,000***; and

(3) Children including adopted children and step children, of a Government Servant who are wholly dependent on such Government servant.

The above details shall be declared and certified by the Government Servant.

**2. Scheme Design:**

The scheme shall get implemented in an **"Assurance Mode"** through Suvarna Arogya Suraksha Trust to the **"State Government Employees and their dependants"** by a network of **"Empanelled Hospitals"** with no financial cap. It shall be "cashless" to the beneficiaries except in following cases;

(1) where the beneficiary opts/desires an higher implants, stents, prosthesis etc., which are costlier than the ones included in the benefit package and

(2) where the beneficiary opts for superior wards other than the one for which he/ she is entitled.

Such difference in cost arising on account of the above circumstances, shall be borne by the beneficiary.

**3. Benefit Packages:**

(1) The scheme covers **Tertiary** treatment under 7 broad specialities viz **Cardiology** (includes cardiothoracic surgery, cardiovascular surgery and other cardiac procedures), **Neurosurgery** (includes Cranial, Spinal and peripheral neurosurgical procedures), **Genitourinary Surgeries** (includes renal and congenital genital malformations), **Oncology** (medical, surgical and radiation), **Pediatric Surgeries** (includes neonatal procedures), **Polytrauma** (includes injury with associated multi-organ involvement) and **Burns** (includes electrical shocks and scalds).

(2) It consists of **"449 surgical procedures"** pertaining to and which fall within the broad specialty groups stated above. In addition, the scheme covers **"50 defined follow-up packages"** that include post hospitalization care for a subset of covered procedures, including consultations, diagnostics and drugs.

The details are as under:

**Specialties & Procedures covered under the scheme:**

| Sl. No. | Speciality | No. of Procedures | No. of follow-up Procedures |
|---|---|---|---|
| 1 | **Cardiac Speciality** (Cardiothorasic Surgery, Cardiovascular Surgery and other Cardiac surgeries) | 145 | 23 |
| 2 | **Cancer** (Surgical Oncology, Medical Oncology & Radiation Oncology) | 189 | 1 |
| 3 | **Neuro Surgery** (Cranial, Spinal and peripheral neurosurgeries) | 50 | 18 |
| 4 | **Genitourinary Surgeries** (includes renal and congenital genital malformations) | 21 | 8 |
| 5 | **Burns** (electrical shocks and scalds surgeries) | 11 | |
| 6 | **Polytrauma cases** (Not covered by Motor Vehicle Insurance) | 8 | |
| 7 | **Neo-Natal and Paediatric** Surgeries | 25 | |
| | **Total Procedures** | 449 | 50 |

**4. Ineligibility:**

The Government Servants shall not be eligible, if the benefits are already availed **"in any of the other"** Government sponsored health schemes; pertaining to the above stipulated 449 procedures against the said 7 broad specialities to avoid the duplication of the benefit.

**5. Network Hospitals:**

Qualitative health care shall be facilitated through an identified Network Hospitals. The process of identification and empanelment shall be a continuous one from **"time to time".** Such of those Hospitals who comply with the criteria of empanelment and also who are already empanelled under **"Vajpayee Arogyashree Scheme"**, shall get empanelled under **"Jyothi Sanjeevini Scheme".**

**6. Entitlement:**

**A. Entitlement of Wards:**

| Sl. No. | Basic Pay | Category of Wards/Class of Accommodations to which entitled |
|---|---|---|
| 1 | Upto Rs. 16,000/- Per Month | General Ward |
| 2 | Rs. 16,001/- to 43,200/- Per Month | Semi Private Ward |
| 3 | Rs. 43,201/- & above | Private Ward |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**7. Ward Rates & Billing:**

The rates for **" General ward", "Semi-Private"** and the **"Private wards"** shall be fixed by Suvarna Arogya Suraksha Trust.

The billing shall be done in accordance with the rates fixed as above.

**8. Beneficiaries Identification:**

The beneficiary is identifiable by virtue of Karnataka Government Insurance Department's Policy Number which shall be integrated with the HRMS data base of the Department of Personnel and Administrative Reforms of the Government of Karnataka.

In case of "Still born" child or child whose age is not above one year, being a beneficiary; the identification is by way of a mere declaration by the Government Servant.

The Government shall allow Suvarna Arogya Suraksha Trust to access the data base of the Government Servants for the purpose of identifying the Government Servants and their dependants.

**9.Contracting with the Implementing Support Agency (ISA):**

The Suvarna Arogya Suraksha Trust shall hire the services of an Implementing Support Agency for the implementation of the said scheme. The ISA shall provide such services to cover the activities including IEC; empanelment of hospitals and accrediting the service providers; establishing provider payment mechanism; training and placement of Arogyamitras in each of the Network Hospitals to assist patients; conducting camps as and when required; establishment of help line/ call center, pre-authorisation and claims processing units: and monitoring & evaluation of service providers .

**10. Software:**

The Suvarna Arogya Suraksha Trust shall develop a scheme specific software to administer the scheme in totality and the complete **"process and procedures"** for its implementation; and it shall be on e-mechanism.

**11. Procedure for pre-authorisation and admission of claims:**

(1) There shall be an Arogyamitras in each of the Network Hospital.

(2) Assistance shall be provided to the beneficiary for investigation, admission.

(3) Pre-authorisation shall get accorded instantly.

(4) After pre-authorisation of the procedure/procedures and at the event of conducting said procedure/procedures, if it is felt necessary to change the procedure/it course or add an another procedure; it shall be done instantly. However, after its conduction and while raising the claims on its submission, the procedure so **"conducted in exigency"** is to be documented with justification. The "Suvarna Arogya Suraksha Trust" shall examine it with the help of Medical Expert, for its admittance.

(5) The beneficiary gets treatment and discharged under a definite schedule.

(6) The claims shall get raised within stipulated time frame from the date of discharge by the Network Hospital.

(7) The claims get processed and paid through RTGS/NEFT to the Net Worked treating hospital within a stipulated time frame.

**12. Help Line/Grievance Cell:**

There shall be a help line/ grievance cell established in the ISA; which shall address the beneficiary instantly / grievances and a review is undertaken by SAST.

**13. Website:**

An exclusive web page is to be designed for the scheme with all the relevant information to be furnished on a real time basis for the public use.

**14. Audit and Accounts:**

There shall be a separate bank account for the scheme.

(1) There shall be a joint operation of fund under the authoritative signatures of the Executive Director, SAST and Director (Finance), SAST.

(2) There shall be a statutory auditor, internal auditor appointed by the Trust.

(3) The accounts of the scheme shall get furnished to the Trust quarterly and annually, post audit.

**P.R. 137**

**S.C. 500**

**T.K. RAMACHANDRA**
Deputy Secretary to Government
Health and Family Welfare Department.

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59